# ಒಂದು ಮಾತು

---

ವಯಸ್ಕರ ಶಿಕ್ಷಣ ಪುಸ್ತಕಮಾಲೆಯಲ್ಲಿ ಈಗಾಗಲೆ ಹಲವು ಪುಸ್ತಕಗಳು ಅಚ್ಚಾಗಿವೆ. ನಮ್ಮ ವಯಸ್ಕರ ತರಗತಿಗಳಲ್ಲಿ ವಿದ್ಯಾವಂತರಾದವರು ತಮ್ಮ ಓದನ್ನು ಮುಂದುವರಿಸಲು ಅನುಕೂಲವಾಗಲೆಂದು ಅವುಗಳನ್ನು ಪ್ರಕಟಿಸುತ್ತಿದ್ದೇವೆ.

ಈ ಪುಸ್ತಕಗಳನ್ನು ಓದಿದವರು ತಮಗೆ ಯಾವ ಪುಸ್ತಕಗಳು ಮೆಚ್ಚಾಗಿವೆ ಎಂಬುದನ್ನು ತಿಳಿಸಿದರೆ, ಯಾವ ಬಗೆಯ ಪುಸ್ತಕಗಳು ಬೇಕು ಎಂಬುದನ್ನು ಬರೆದರೆ, ಅಂಥ ಪುಸ್ತಕಗಳನ್ನು ಪ್ರಕಟಿಸಲು ಅನುಕೂಲವಾಗುತ್ತದೆ.

ವಯಸ್ಕರಿಗೆ ರುಚಿಸುವ ಇಂತಹ ಉಪಯುಕ್ತ ವಿಷಯಗಳ ಮೇಲೆ ಸುಮಾರು ೨೪ ಅಥವಾ ೩೨ ಅಚ್ಚಿನ ಪುಟಗಳಿಗೆ ಮೀರದಷ್ಟು ಲೇಖನ ಕಳುಹಿಸಿದರೆ, ಸೂಕ್ತಕಂಡಲ್ಲಿ ಪ್ರಕಟಿಸುತ್ತೇವೆ.

ಸಂಪಾದಕ
ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ

---

ವಯಸ್ಕರ ಶಿಕ್ಷಣ ಸಮಿತಿ ಮುದ್ರಣಾಲಯ, ಮೈಸೂರು

ವಯಸ್ಕರ ಶಿಕ್ಷಣ ಪುಸ್ತಕಮಾಲೆ—೧೧೯

# ಬೆಳುಗೊಳದ ಗೊಮ್ಮಟೇಶ

ಜೀ. ಶಂ. ಪರಮಶಿವಯ್ಯ

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

# ಬೆಳುಗೊಳದ ಗೊಮ್ಮಟೇಶ

೧

ಹಿಂದೆ ಅಯೋಧ್ಯಾಪಟ್ಟಣದಲ್ಲಿ ನಾಭಿರಾಜನು ಆಳುತ್ತಿದ್ದನು. ಇವನನ್ನು ಹದಿನಾಲ್ಕನೆಯ ಮನು ಎಂದು ಕರೆಯುತ್ತಿದ್ದರು. ಲೋಕದಲ್ಲಿ ಆಗಾಗ ಅಧರ್ಮ, ಅನ್ಯಾಯಗಳು ಹೆಚ್ಚಾಗುತ್ತವೆ. ಇದರಿಂದ ಜನರಲ್ಲಿ ಭೀತಿ ತಲೆದೋರುತ್ತದೆ. ಲೋಕದ ಸ್ಥಿತಿ ಹೀಗಾದರೆ ಮುಂದೇನು ಗತಿ ಎಂಬ ಕಳವಳ ಉಂಟಾಗುತ್ತದೆ. ಈ ವೇಳೆಯಲ್ಲಿ ಕೆಲವು ಮಹಾತ್ಮರು ಅವತರಿಸುತ್ತಾರೆ. ಜಗತ್ತಿನ ಕರ್ಮದ ಮೂಲವನ್ನು ಕಿತ್ತು ಮಾನವರನ್ನು ಉದ್ಧಾರಮಾಡುತ್ತಾರೆ. ಎಲ್ಲೆಲ್ಲಿಯೂ ಸತ್ಯ, ಶಾಂತಿಗಳು ನೆಲಸುವಂತೆ ಮಾಡುತ್ತಾರೆ. ಜನರಿಗೆ ಸುಖದ ದಾರಿ ತೋರುತ್ತಾರೆ. ಈ ರೀತಿ ಅವತಾರವೆತ್ತಿ ಪುಣ್ಯ ಕೆಲಸವನ್ನು ಮಾಡುವವರನ್ನು 'ಮನು' ಗಳು ಎಂದು ಜೈನ ಧರ್ಮದಲ್ಲಿ ಕರೆಯುತ್ತಾರೆ. ಈ ಮನುಗಳು ಇದುವರೆಗೂ ಹದಿನಾಲ್ಕು ಮಂದಿ ಜನ್ಮವೆತ್ತಿದ್ದಾರೆ. ನಾಭಿರಾಜನೇ ಹದಿನಾಲ್ಕನೆಯ ಮನು.

ನಾಭಿರಾಜನ ರಾಣಿಯು ಹೆಸರು ಮರುದೇವಿ. ಗುಣವತಿ, ಪತಿಪರಾಯಣೆ, ತ್ಯಾಗ– ಧರ್ಮಗಳಲ್ಲಿ ಪತಿಗೆ ಅನುರೂಪಳಾದ ಮಡದಿ. ಒಳ್ಳೆಯ ದೈವಭಕ್ತೆ. ಈಕೆಯಲ್ಲಿ ವೃಷಭದೇವನೆಂಬ ಮಗನು ಜನಿಸಿದನು. ಇವನೇ ಆದಿ ತೀರ್ಥಂಕರ ಎಂದು ಹೆಸರಾದವನು.

ಲೋಕದಲ್ಲಿ ಒಂದು ಕಾಲಕ್ಕೆ ಧರ್ಮ ಹೆಚ್ಚುತ್ತಾ ಹೋಗುತ್ತದೆ. ಈ ಕಾಲವನ್ನು 'ಉತ್ಸರ್ಪಿಣಿ' ಎಂದು ಕರೆಯುತ್ತಾರೆ.

ಮತ್ತೊಂದು ಕಾಲದಲ್ಲಿ ಧರ್ಮ ಇಳಿಮುಖವಾಗುತ್ತಾ ಹೋಗುತ್ತದೆ. ಇದನ್ನು 'ಅಪಸರ್ಪಿಣಿ' ಎನ್ನುತ್ತಾರೆ. ಈ ಉತ್ಸರ್ಪಿಣಿ, ಅಪಸರ್ಪಿಣಿಗಳಲ್ಲಿ ಅವತಾರವೆತ್ತಿ ಧರ್ಮವನ್ನು ಹರಡುವ ಮಹಾತ್ಮರೇ ತೀರ್ಥಂಕರರು. ಇಂಥ ತೀರ್ಥಂಕರರು ಇಪ್ಪತ್ತನಾಲ್ಕುಮಂದಿ. ವೃಷಭದೇವನೇ ಮೊದಲನೆಯ ತೀರ್ಥಂಕರನಾದುದರಿಂದ ಅವನಿಗೆ ಆದಿತೀರ್ಥಂಕರ ಅಥವಾ ಆದಿನಾಥ ಎಂಬ ಹೆಸರಾಯಿತು.

ವೃಷಭದೇವನು ಬೆಳೆದು ದೊಡ್ಡವನಾದ ಮೇಲೆ ನಾಭಿರಾಜನು ವೈಭವದಿಂದ ಅವನ ವಿವಾಹವನ್ನು ನೆರವೇರಿಸಿದನು. ಯಶಸ್ವತಿ ಮತ್ತು ಸುನಂದ ಎಂಬ ಚೆಲುವೆಯರು ಅವನ ರಾಣಿಯರಾದರು. ಹಿರಿಯವಳಾದ ಯಶಸ್ವತಿಯಲ್ಲಿ ನೂರು ಜನ ಗಂಡು ಮಕ್ಕಳಾದರು. ಕಿರಿಯವಳಾದ ಸುನಂದೆಯಲ್ಲಿ ಒಬ್ಬ ಗಂಡು ಮಗನೂ ಇಬ್ಬರು ಹೆಣ್ಣು ಮಕ್ಕಳೂ ಹುಟ್ಟಿದರು. ಯಶಸ್ವತಿಯಲ್ಲಿ ಹುಟ್ಟಿದ ಹಿರಿಯ ಮಗನೇ ಪ್ರಸಿದ್ಧನಾದ ಭರತ ಚಕ್ರವರ್ತಿ. ಸುನಂದೆಯ ಮಗನೇ ಪುಣ್ಯಪುರುಷನಾದ ಬಾಹುಬಲಿದೇವ. ಬಾಹುಬಲಿ ಹುಟ್ಟಿದಾಗಲೇ ಅತ್ಯಂತ ತೇಜೋವಂತನಾಗಿದ್ದನು. ಅವನ ಕಣ್ಣುಗಳಲ್ಲಿ ಬೆಳದಿಂಗಳ ಹೊಳಪಿತ್ತು. ಮುಖದಲ್ಲಿ ದಿವ್ಯಗಾಂಭೀರ್ಯವಿತ್ತು. ಅವನ ವಿಶಾಲವಾದ ಭುಜ, ಅಂದವಾದ ಮೈಕಟ್ಟು ಆಕರ್ಷಕವಾಗಿದ್ದುವು. ಬಹು ಬಲಶಾಲಿಯಾಗಿಯೂ, ಧರ್ಮಾತ್ಮನಾಗಿಯೂ ಬೆಳೆಯುತ್ತಾನೆಂದು ಎಲ್ಲರೂ ಭಾವಿಸಿದರು.

ನಾಭಿರಾಜನಿಂದ ತನಗೆ ಬಂದ ರಾಜ್ಯವನ್ನು ವೃಷಭದೇವನು ಧರ್ಮದಿಂದ ಪಾಲಿಸುತ್ತಿದ್ದನು. ಹಾಗೆಯೇ ಅವನ ಪ್ರಜೆಗಳೂ ನ್ಯಾಯಶೀಲರಾಗಿದ್ದರು. ಸತ್ಯಸಂಧರೂ ದಾನಿಗಳೂ ಆಗಿದ್ದರು. ಧೈರ್ಯಸಾಹಸಗಳಲ್ಲಿಯೂ ಅವರಿಗೆ ಎಣೆಯಿರಲಿಲ್ಲ. ರಾಜನು ತನ್ನ ಕುಮಾರರನ್ನು ಯೋಗ್ಯನಾದ ಗುರುವಿನಲ್ಲಿ ಬಿಟ್ಟು ಸಕಲ ವಿದ್ಯೆ

ಗಳನ್ನೂ ಕಲಿಸಿದನು. ಶೂರರೂ ಧೈರ್ಯಶಾಲಿಗಳೂ ದೃಢವಾದ ಮೈಕಟ್ಟುಳ್ಳವರೂ ಆದ ತನ್ನ ಮಕ್ಕಳನ್ನು ನೋಡಿ ವೃಷಭರಾಜನಿಗೆ ಹಿಡಿಸಲಾರದಷ್ಟು ಸಂತೋಷ. ಅದರಲ್ಲೂ ಭರತ ಮತ್ತು ಬಾಹು ಬಲಿಗಳು ತಂದೆಯ ಅಚ್ಚುಮೆಚ್ಚಿನವರಾಗಿದ್ದರು. ಬಾಹು ಬಲಿ ಯಂತೂ ತನ್ನ ಧೀರಸ್ವಭಾವದಿಂದ, ಶಾಂತಗುಣಗಳಿಂದ ಎಲ್ಲರ ಒಲವನ್ನೂ ಗಳಿಸಿಕೊಂಡಿದ್ದನು. ಅವನ ಗಾಂಭೀರ್ಯ, ತೇಜಸ್ಸು ಗಳಂತೂ ಅಪೂರ್ವವಾಗಿದ್ದುವು. ಅವನದು ನೀಳವಾದ ಶರೀರ, ವಿಶಾಲವಾದ ಎದೆ, ಧೀರವಾದ ಭುಜಕಟ್ಟು, ಅಂದವಾದ ಮುಖ, ತೂಕವಾದ ನಡಿಗೆ ಅದಕ್ಕೆ ತಕ್ಕ ಗುಣ. ಇಂಥ ಮಗನನ್ನು ಪಡೆದ ವೃಷಭರಾಜನಿಗೆ ಹೆಮ್ಮೆಎನಿಸುತ್ತಿತ್ತು. ನಯವಿನಯಗಳಲ್ಲಿ ಹಿರಿಯ ಮಗನಾದ ಭರತನಿಗಿಂತಲೂ ಒಂದು ಕೈ ಮೇಲನ್ನುವಂತಿದ್ದನು



ವೃಷಭ ದೇವನು ಬಾಹುಬಲಿಗೆ ಪೌದನಾಪುರಿಯಲ್ಲಿ ಪಟ್ಟ ಕಟ್ಟಿದನು

ಬಾಹುಬಲಿ. ಹೀಗೆ ಮಕ್ಕಳೆಲ್ಲಾ ವಿದ್ಯಾವಿನಯ ಸಂಪನ್ನರಾಗಿ ಬೆಳೆದು ದೊಡ್ಡವರಾದರು.

ಕೆಲವು ದಿನಗಳು ಕಳೆದುವು. ವೃಷಭದೇವನಿಗೆ ರಾಜ್ಯ ಭೋಗಗಳಲ್ಲಿ ವೈರಾಗ್ಯ ತಲೆದೋರಿತು. ರಾಜ್ಯವನ್ನು ಮಕ್ಕಳಿಗೆ ಬಿಟ್ಟುಕೊಟ್ಟು ತಪಸ್ಸಿಗೆ ಹೊರಡಬೇಕೆಂದು ಯೋಚಿಸಿದ. ಎಲ್ಲ ಮಕ್ಕಳಿಗೂ ಅವರ ಶಕ್ತಿ ಸಾಮರ್ಥ್ಯಗಳಿಗೆ ತಕ್ಕಂತೆ ರಾಜ್ಯವನ್ನು ಹಂಚಿಯೂ ಬಿಟ್ಟ. ಅದರಂತೆ ಭರತನಿಗೆ ಅಯೋಧ್ಯಾ ಪಟ್ಟಣವೂ ಬಾಹುಬಲಿಗೆ ಪೌದನಾಪುರಿಯೂ ದೊರೆತವು. ಇತರ ರಾಜ ಕುಮಾರರೂ ಒಂದೊಂದು ಪಟ್ಟಣಕ್ಕೆ ಒಡೆಯರಾದರು. ಇಷ್ಟೆಲ್ಲ ಮುಗಿದ ಮೇಲೆ ವೃಷಭದೇವನು ದೀಕ್ಷೆಯನ್ನು ಕೈಗೊಂಡು ತಪೋ ವನಕ್ಕೆ ತೆರಳಿದನು.

ಭರತನು ಅಯೋಧ್ಯಾಪಟ್ಟಣವನ್ನು ಆಳುತ್ತಿದ್ದಾಗ ಒಂದು ಕೌತುಕ ನಡೆಯಿತು. ಅವನ ಆಯುಧಶಾಲೆಯಲ್ಲಿ ಒಂದು ಚಕ್ರ ರತ್ನ ಕಾಣಿಸಿಕೊಂಡಿತು. ಈ ಚಕ್ರರತ್ನ ಕಾಣಿಸಿಕೊಂಡರೆ ಆ ರಾಜನು ದೊಡ್ಡ ಚಕ್ರವರ್ತಿಯಾಗುವನಂತೆ. ಭರತ, ತಾನೂ ದೊಡ್ಡ ಚಕ್ರವರ್ತಿಯಾಗುವೆನೆಂದು ಹಿಗ್ಗಿದನು. ಆ ಚಕ್ರವನ್ನು ನಾನಾರೀತಿಗಳಲ್ಲಿ ಪೂಜಿಸಿ ತನಗೆ ದೊರೆಯುವ ಪದವಿಗೆ ಹೆಮ್ಮೆ ಗೊಂಡನು.

ಚಕ್ರವರ್ತಿಯ ಪದವಿ ಸುಲಭವಾಗಿ ದೊರಕೀತೆ? ಭೂಮಂಡ ಲದ ರಾಜರನ್ನೆಲ್ಲ ಗೆಲ್ಲಬೇಕು. ಅವರಿಂದ ಕಪ್ಪಕಾಣಿಕೆ ಗಳನ್ನು ಪಡೆದುಕೊಳ್ಳಬೇಕು. ಹಾಗೆ ಮಾಡುವುದು ಸುಲಭದ ಮಾತಲ್ಲ. ಆಗಿನ ಕಾಲದ ರಾಜರು ಅತ್ಯಂತ ಶೂರರು. ಒಬ್ಬೊಬ್ಬ ರಲ್ಲಿಯೂ ದೊಡ್ಡ ದೊಡ್ಡ ಸೈನ್ಯಗಳಿದ್ದುವು. ಆದರೇನು ಭರತನ ಸೈನ್ಯಕ್ಕೆ ಸರಿದೂಗಬಲ್ಲ ಸೈನ್ಯ ಭೂಮಂಡಲದಲ್ಲಿಯೇ ಇರಲಿಲ್ಲ. ಅವನೂ ಮಹಾ ಶೂರನೆ. ದಿಗ್ವಿಜಯ ಹೊರಡಬೇಕೆಂದು ಸಿದ್ಧತೆಗೆ

ತೊಡಗಿದನು. ಒಂದು ಶುಭ ದಿನದಲ್ಲಿ ಭರತನ ಮಹಾಸೇನೆ ದಿಗ್ವಿಜಯಕ್ಕೆ ಹೊರಟೇ ಬಿಟ್ಟಿತು.

ದೊಡ್ಡ ಪ್ರವಾಹದಂತೆ ಉಕ್ಕಿ ಬಂದ ಭರತನ ಸೈನ್ಯ ಭೂಮಂಡಲದ ರಾಜಾಧಿರಾಜರನ್ನೆಲ್ಲ ಒಬ್ಬೊಬ್ಬರನ್ನಾಗಿ ವಶಮಾಡಿಕೊಳ್ಳುತ್ತ ಬಂದಿತು. ಯಾರೂ ತನ್ನೆದುರು ನಿಂತು ಹೋರಾಡುವಂತೆ ಭರತನಿಗೆ ತೋರಲಿಲ್ಲ. ಅದ್ಭುತ ವಿಜಯವನ್ನು ಪಡೆದು ತನಗೆ ಯಾರೂ ಸಮಾನರೇ ಇಲ್ಲವೆಂಬಂತೆ ಹಿಂದಿರುಗಿದ. ತಮ್ಮ ದೊರೆಯನ್ನು ಸ್ವಾಗತಿಸಲು ಅಯೋಧ್ಯೆಯ ಪ್ರಜೆಗಳು ಸಂಭ್ರಮದಿಂದ ಕಾದಿದ್ದರು. ಪುರದ ಹೆಬ್ಬಾಗಿಲನ್ನು ತಳಿರುತೋರಣಗಳಿಂದ ಅಲಂಕರಿಸಿದ್ದರು. ಭರತನಿಗೆ ತನ್ನ ದಿಗ್ವಿಜಯ ಹೆಮ್ಮೆಯನ್ನುಂಟುಮಾಡಿತು. ನಗುತ್ತ ಪುರವನ್ನು ಪ್ರವೇಶಿಸಲು ಮುಂದೆ ಬಂದನು. ಜಯಭೇರಿಗಳು ಆಕಾಶವನ್ನೇ ಭೇದಿಸುವಂತೆ ಕೇಳಿಬರುತ್ತಿದ್ದುವು. ಪ್ರಜೆಗಳು ನಾನಾ ಬಗೆಯಲ್ಲಿ ಸ್ತೋತ್ರ ಮಾಡುತ್ತಿದ್ದರು. ಹೂವಿನ ಹಾರಗಳನ್ನೂ ಮಂಗಳದ್ರವ್ಯಗಳನ್ನೂ ಹಿಡಿದು ತನಗಾಗಿ ಕಾದಿರುವ ಪ್ರಮುಖರ ಎದುರು ಭರತ ಅಯೋಧ್ಯೆಯನ್ನು ಪ್ರವೇಶಿಸಿದನು. ಆದರೆ ಅವನ ಚಕ್ರರತ್ನ ಮಾತ್ರ ಮುಂದೆ ಬಾರದಾಯಿತು. ಹೆಬ್ಬಾಗಿಲಿನಲ್ಲಿಯೇ ಅದು ನಿಂತು ಹೋಯಿತು. ಇದರಿಂದ ಅಚ್ಚರಿಗೊಂಡು ಭರತನು ಪುರೋಹಿತರಲ್ಲಿ ವಿಚಾರಿಸಿದನು. ಭೂಮಂಡಲದಲ್ಲಿ ಅವನಿಗೆ ಎಲ್ಲರೂ ಶರಣಾಗಿರಲಿಲ್ಲ. ಅವನಿಗೆರಗದವರು ಇನ್ನೂ ಇರುವರೆಂದೂ ಆದುದರಿಂದಲೇ ಚಕ್ರರತ್ನ ಆ ರೀತಿ ನಿಂತಿತೆಂದೂ ತಿಳಿದುಬಂದಿತು. ಭರತನಿಗೆ ಶರಣಾಗಬೇಕಾಗಿದ್ದವರು ಅವನ ಸಹೋದರರು ಮಾತ್ರ. ವೃಷಭ ದೇವನು ಎಲ್ಲರಿಗೂ ಸಮಾನವಾಗಿ ರಾಜ್ಯವನ್ನು ಹಂಚಿಕೊಟ್ಟಿದ್ದನು. ಯಾರ ಹಂಗಿನಲ್ಲಿಯೂ ಅವರು ಕಾಲಹರಣ ಮಾಡುತ್ತಿದ್ದವರಲ್ಲ. ಭರತ ತಮ್ಮ ಸಹೋದರ

ನೆಂಬುದು ಅವರಿಗೆ ತಿಳಿಯದಿರಲಿಲ್ಲ. ಅವನು ಸಕಲ ರಾಜ್ಯ ಗಳನ್ನು ಗೆದ್ದು ಬಂದ ವಿಷಯವೂ ಅವರಿಗೆ ಮನವರಿಕೆಯಾಗಿದ್ದಿತು. ತಂದೆ ಕೊಟ್ಟ ರಾಜ್ಯವನ್ನು ಆಳುತ್ತಿರುವಾಗ ಅಣ್ಣನಿಗೇಕೆ ತಲೆಬಾಗಬೇಕೆಂದು ಅವರು ಮೌನದಿಂದಿದ್ದರು. ಇದರಿಂದ ಭರತನಿಗೆ ತಡೆಯಲಾರದ ಕೋಪ ಬಂದಿತು. ಅವರನ್ನೆಲ್ಲಾ ಏನು ಮಾಡಿ ಬಿಡಲಿ ಎನ್ನುವಂತೆ ಕಿಡಿಕಿಡಿಯಾದ. ಪ್ರಪಂಚದ ರಾಜರೆಲ್ಲಾ



ಅಣ್ಣನ ಸೊಕ್ಕನ್ನು ಮುರಿಯಲೇಬೇಕೆಂದು ಬಾಹುಬಲಿ ನಿಶ್ಚಯಿಸಿದನು, ಯುದ್ಧಕ್ಕೆ... ಒಪ್ಪಿಕೊಂಡನು

ತನಗೆ ಶರಣಾಗಿರುವಾಗ ಇವರು ಹೀಗೆ ಮಾಡಬಹುದೆ ? ಭರತ ತನ್ನ ಸೋದರರ ಮೇಲೆಯೇ ದಂಡೆತ್ತಿ ಹೊರಟ. ತನ್ನ ತಮ್ಮಂದಿ

ರೆಂಬ ಅರಿವೆಯೂ ಇಲ್ಲದೆ ಈ ರೀತಿ ಯುದ್ಧಕ್ಕೆ ಬಂದ ಸ್ವಾರ್ಥಿ–ಯಾದ ಅಣ್ಣನ ವಿಷಯದಲ್ಲಿ ಅವರಿಗೆಲ್ಲಾ ಜುಗುಪ್ಸೆ ತಲೆದೋರಿತು. ರಾಜ್ಯಲೋಭದಿಂದ ಅಣ್ಣ ಈ ರೀತಿ ಮಾಡಿದನಲ್ಲ ಎಂದು ನೊಂದು ಅವರೆಲ್ಲಾ ತಮ್ಮ ರಾಜ್ಯಕೋಶಗಳನ್ನು ತೊರೆದು ತಪಸ್ಸು ಮಾಡುತ್ತಿದ್ದ ತಮ್ಮ ತಂದೆಯ ಬಳಿಗೆ ಹೊರಟು ಹೋದರು. ಆದರೆ ಬಾಹುಬಲಿ ಮಾತ್ರ ಹಾಗೆ ಮಾಡಲಿಲ್ಲ. ಅಣ್ಣನ ಸೊಕ್ಕನ್ನು ಮುರಿಯಲೇಬೇಕೆಂದು ಅವನು ನಿಶ್ಚಯಿಸಿದನು.

ಎಲ್ಲರಂತೆ ಬಾಹುಬಲಿಯೂ ತನಗೆ ಹೆದರಿ ಶರಣಾಗತನಾಗುತ್ತಾನೆಂದು ಭರತ ತಿಳಿದಿದ್ದನು. ಯುದ್ಧಕ್ಕೆ ಕರೆಯನ್ನು ಕಳಿಸಿದಾಗ ಬಾಹುಬಲಿ ಸಂತೋಷವಾಗಿ ಒಪ್ಪಿಕೊಂಡುಬಿಟ್ಟನು. ಇದನ್ನು ಕೇಳಿದ ಭರತ ಚಕಿತನಾದನು. ಬಾಹುಬಲಿ ಮಹಾವೀರನೇನೋ ನಿಜ. ಆದರೆ, ತನ್ನ ಬಳಿ ದೊಡ್ಡ ಸೇನೆಯಿದೆ—ತಾನೂ ಧೀರನೇ ಎಂಬ ಹೆಮ್ಮೆ ಭರತನಿಗೆ. ಅವನ ಅಹಂಕಾರವನ್ನು ಕ್ಷಣ ಮಾತ್ರದಲ್ಲಿ ಮುರಿಯುತ್ತೇನೆ ಎಂದು ಮೀಸೆಯನ್ನು ಹುರಿಮಾಡಿದ.

ಭರತ–ಬಾಹುಬಲಿಗಳ ಯುದ್ಧದ ವಿಷಯ ಎಲ್ಲೆಲ್ಲಿಯೂ ಹರಡಿಹೋಯಿತು. ಅಣ್ಣತಮ್ಮಂದಿರ ಈ ಕಾಳಗದಿಂದ ಜನರೆಲ್ಲಾ ಭೀತಿಗೊಂಡರು. ಯಾರಿಗೆ ಜಯವೋ ? ಯಾರಿಗೆ ಅಪಜಯವೋ ? ಮುಂದೇನು ವಿನಾಶ ಕಾದಿದೆಯೋ ? ಎಂಬ ದಿಗಿಲು ಎಲ್ಲೆಡೆಯಲ್ಲಿಯೂ ಆವರಿಸಿತು. ಯಾರು ಸೋತರೂ ಸಹಿಸದಂಥ ಸ್ಥಿತಿ ಅದು. ಯುದ್ಧದಿಂದ ಲಕ್ಷಾಂತರ ಸಾವುನೋವುಗಳಲ್ಲದೆ ಮುಂದೆ ಕ್ಷಾಮಡಾಮರಗಳಿಗೂ ಕಾರಣವಾಗಬಹುದು. ಇದರಿಂದ ಆಗಬಹುದಾದ ನಷ್ಟವನ್ನು ಯಾವ ರೀತಿಯಲ್ಲಾದರೂ ತಡೆಗಟ್ಟಬಹುದೆ ? ಎಂದು ಕೆಲವು ಹಿರಿಯರೂ ಮಂತ್ರಿಗಳೂ ಕಲೆತು ಯೋಚಿಸಿದರು. ಎರಡು ಸೇನೆಗಳೂ ವ್ಯರ್ಥವಾಗಿ ಕಾದಾಡಿ ರಕ್ತದ

ಕೋಡಿ ಹರಿಯುವುದು ಸರಿಯಲ್ಲವೆನಿಸಿತು ಅವರಿಗೆ. ಅದಕ್ಕಾಗಿ ಭರತ, ಬಾಹುಬಲಿಗಳಿಬ್ಬರೇ ಪರಸ್ಪರ ಹೋರಾಡುವುದೆಂದು ನಿಶ್ಚಯವಾಯಿತು. ಈ ದ್ವಂದ್ವ ಯುದ್ಧದಲ್ಲಿ ಯಾರ ಕೈ ಮೇಲಾಗುವುದೋ ಅವರೇ ಗೆದ್ದಂತೆ ಎಂದು ನಿರ್ಧರಿಸಿದರು. ಅಣ್ಣ ತಮ್ಮಂದಿರಿಬ್ಬರಿಗೂ ಇದು ಸಮ್ಮತವಾಗಿ ತೋರಿತು. ತನ್ನ ಬಳಿ ಚಕ್ರರತ್ನವಿದೆ ಎಂಬ ಹೆಮ್ಮೆಯಿಂದ ಭರತ ಒಪ್ಪಿಕೊಂಡ. ಭುಜ ಬಲ ಪರಾಕ್ರಮಿಯಾದ ಬಾಹುಬಲಿಗೂ ಇದೇ ಸರಿಯೆನಿಸಿತು.

ಭರತ ಐನೂರು ಬಿಲ್ಲಿತ್ತರದ ವೀರನಾದರೆ, ಬಾಹುಬಲಿ ಐನೂರ ಇಪ್ಪತ್ತೈದು ಬಿಲ್ಲಿತ್ತರದ ಕಟ್ಟಾಳು. ನೀಳಕಾಯದ ಈ ಇಬ್ಬರು ಮಹಾ ವ್ಯಕ್ತಿಗಳು ಯುದ್ಧಕ್ಕೆ ಸನ್ನದ್ಧರಾಗಿ ನಿಂತರು. ಇಬ್ಬರ ಮುಖದಲ್ಲಿಯೂ ಕ್ಷಾತ್ರ ತೇಜಸ್ಸು ಉಕ್ಕಿ ಹರಿಯುತ್ತಿತ್ತು. ಎರಡು ದೊಡ್ಡ ಪರ್ವತಗಳೇ ಮನುಷ್ಯರ ಆಕೃತಿಯನ್ನು ತಾಳಿ ಈ ರೀತಿ ನಿಂತಿವೆ ಎನ್ನುವಂತೆ ತೋರುತ್ತಿದ್ದ ಅವರ ಶರೀರದಲ್ಲಿ ವೀರ ರಸ ಹೊರಚಿಮ್ಮುವಂತಿತ್ತು. ಈ ಸೋದರರ ಕಾಳಗವನ್ನು ನೋಡಲು ನಾನಾ ಕಡೆಗಳಿಂದ ಜನ ಬಂದು ನೆರೆದರು. ಎರಡು ಕಡೆಯ ಸೇನೆಗಳಲ್ಲಿಯೂ ಕುತೂಹಲ ತುಂಬಿದ್ದಿತು. ಭಯಂಕರ ಮೌನ ಹರಡಿದ್ದ ಆ ಮಲ್ಲರಂಗದಲ್ಲಿ ಭರತ ಬಾಹುಬಲಿಗಳು ಜೈಕಾರಗಳ ನಡುವೆ ಕಾಳಗವನ್ನು ಆರಂಭಿಸಿಯೇ ಬಿಟ್ಟರು.

ಮೊದಲು ದೃಷ್ಟಿಯುದ್ಧ ನಡೆಯಿತು. ದೃಷ್ಟಿಯುದ್ಧವೆಂದರೆ ಒಬ್ಬರನ್ನೊಬ್ಬರು ರುದ್ರವಾಗಿ ನೋಡುವುದು. ಎವೆಯಿಕ್ಕದೆ ಒಂದೇಸಮನೆ ಬೆಂಕಿಯನ್ನುಗುಳುವಂತೆ ನೋಡುತ್ತಿರುವಾಗ ಯಾರು ತೇಜಸ್ಸು ಭಂಗವಾಗಿ ಮೊದಲು ತಲೆ ತಗ್ಗಿಸುವರೋ ಅವರೇ ಸೋತಂತೆ. ಬಾಹುಬಲಿಯ ಭೀಕರ ದೃಷ್ಟಿ ಭರತನ ಕಣ್ಣು ಮುಚ್ಚಿಸಿತು. ಭರತ ಸೋತು ತಲೆ ತಗ್ಗಿಸಬೇಕಾಯಿತು.

ಅನಂತರ ಜಲಯುದ್ಧ ಆರಂಭವಾಯಿತು. ನೀರಿನಲ್ಲಿ ಹೋರಾಡುವ ಈ ಯುದ್ಧದಲ್ಲಿಯೂ ಭರತನಿಗೇ ಸೋಲಾಯಿತು. ಇದಾದ ಮೇಲೆ



ಆದಾದ ಮೇಲೆ ಬಾಹು ಯುದ್ಧ ನಡೆಯಿತು. ಈಗಲೂ ಭರತನಿಗೆ ಸೋಲು ಕಾದಿತ್ತು

ಬಾಹುಯುದ್ಧ ನಡೆಯಿತು. ಈಗಲೂ ಭರತನಿಗೆ ಸೋಲು ಕಾದಿತ್ತು. ಒಂದು ಕಡೆಯ ಸೈನ್ಯ ಆನಂದದಿಂದ ಜೈಕಾರ ಮಾಡತೊಡಗಿತು. ಮತ್ತೊಂದು ಕಡೆಯ ಸೈನ್ಯ ವ್ಯಸನದಿಂದ ತಲೆತಗ್ಗಿಸಿತು. ಭರತ ಬಾಹುಬಲಿಗಳಲ್ಲಿ ಹೀಗೆ ಅನೇಕ ಬಗೆಯ ಯುದ್ಧ ನಡೆದು ಭರತನೇ ಮೇಲಿಂದ ಮೇಲೆ ಸೋಲ ತೊಡಗಿದನು. ಇದರಿಂದ ಅವ ಮಾನಿತನಾದ ಭರತನ ಸಿಟ್ಟು ಮಿತಿಮೀರಿತು. ಪ್ರಪಂಚವನ್ನೇ ಸುಟ್ಟುಬಿಡುವಷ್ಟು ಕೋಪ ಅವನಿಗುಂಟಾಯಿತು. ಹುಚ್ಚನಂತೆ ಆರ್ಭಟಿಸಿ ಚಕ್ರರತ್ನವನ್ನು ತನ್ನ ಬಳಿಗೆ ಕರೆದನು. ಎಲ್ಲೆಲ್ಲಿಯೂ

ಹಾಹಾಕಾರವೆದ್ದಿತು. 'ಮುಂದೇನು!' ಎಂಬ ದಿಗಿಲುಂಟಾಯಿತು. ಚಕ್ರರತ್ನ ಬಾಹುಬಲಿಯನ್ನು ಬಲಿ ತೆಗೆದುಕೊಳ್ಳುತ್ತದೆ– ಎಂದು ಎಲ್ಲರೂ ಭಯದಿಂದ ನಡುಗಿದರು. ಬಾಹುಬಲಿಯ ಶಿರವನ್ನು ತರಿದು ತರುವಂತೆ ಹೇಳಿ ಭರತ, ಚಕ್ರರತ್ನವನ್ನು ಪ್ರಯೋಗ ಮಾಡಿ ಬಿಟ್ಟನು. ನಿಶ್ಚಲವಾಗಿ ನಿಂತಿದ್ದ ಬಾಹುಬಲಿಯ ಕಡೆಗೆ ಚಕ್ರರತ್ನ ದಿವ್ಯ ಪ್ರಭೆಯನ್ನು ಚೆಲ್ಲುತ್ತಾ ಹರಿದು ಬಂತು. ಎಲ್ಲರೂ ಕ್ಷಣಕಾಲ ಸ್ತಬ್ಧರಾದರು. ಬಾಹುಬಲಿಯನ್ನು ಸಮೀಪಿಸಿತು, ಆ ಚಕ್ರರತ್ನ. ಎಲ್ಲರೂ ಗಾಬರಿಗೊಂಡರು. ಆದರೆ ಬಾಹುಬಲಿ ಮಾತ್ರ ಅಲುಗದೆ ಗಂಭೀರ ನೋಟವನ್ನು ಬೀರುತ್ತ ಧೀರನಂತೆ ಎದೆ ಚಾಚಿ ನಿಂತನು. ಚಕ್ರರತ್ನ ಹತ್ತಿರ ಬಂದು ಬಾಹುಬಲಿಯನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿತು. ಏನೂ ಅರಿಯದಂತೆ ಬಂದು ಬಾಹುಬಲಿಯ ಭುಜದ ಬಳಿ ನಿಂತುಬಿಟ್ಟಿತು. ಈಗ ಭರತ ತಲೆ ತಗ್ಗಿಸಲೇ ಬೇಕಾಯಿತು. ಸೋಲನ್ನು ಒಪ್ಪಿಕೊಳ್ಳಲೇಬೇಕಾಯಿತು. ಸಮಸ್ತ ಪರಿವಾರದ ನಡುವೆ ಭರತ ಚಕ್ರವರ್ತಿ ತಮ್ಮನಿಂದ ಸೋಲಿಸಲ್ಪಟ್ಟನು.

ಬಾಹುಬಲಿ ಸೋತುನಿಂತ ಅಣ್ಣನ ಮುಖವನ್ನು ನೋಡಿದನು; ಅವನ ಹೃದಯಕ್ಕೆ ಬೆಂಕಿಬಿದ್ದಂತಾಯಿತು. ತನ್ನಿಂದ ಅಣ್ಣನಿಗೆ ಇಷ್ಟು ಅಪಮಾನವಾಯಿತಲ್ಲಾ ಎಂದು ಅವನು ಬಹುವಾಗಿ ನೊಂದನು. ಪಶ್ಚಾತ್ತಾಪ ಪಟ್ಟನು. ತನ್ನ ರಾಜ್ಯದ ಮೇಲೆ ಅಣ್ಣನಿಗೆ ವ್ಯಾಮೋಹವುಂಟಾಯಿತು. ಈ ರಾಜ್ಯಕ್ಕಾಗಿ ತಮ್ಮಿಬ್ಬರಿಗೂ ಯುದ್ಧವಾಯಿತು. ಇಷ್ಟೆಲ್ಲಕ್ಕೂ ಕಾರಣವಾದ ಈ ರಾಜ್ಯವೇ ತನಗೆ ಬೇಡವೆನಿಸಿತು. ತನ್ನ ಸಮಸ್ತ ರಾಜ್ಯವನ್ನೂ ಅಣ್ಣನಿಗೆ ಬಿಟ್ಟುಕೊಟ್ಟನು. ತಾನು ದೀಕ್ಷೆ ಪಡೆದು ತಪಸ್ಸಿಗೆ ಹೊರಟು ಹೋದನು.

ಹೀಗೆ ರಾಜ್ಯವನ್ನು ತೊರೆದು ಬಂದ ಬಾಹುಬಲಿ ಅನೇಕ ವರ್ಷಗಳ ಕಠಿಣ ತಪಸ್ಸು ಮಾಡಿದನು. ಅವನ ಸುತ್ತಲೂ ಹುತ್ತ

ಗಳು ಬೆಳೆದುವು. ಮೈ ತುಂಬ ಬಳ್ಳಿಗಳು ಹಬ್ಬಿದುವು. ಬಾಹುಗಳ ಮೇಲೆಲ್ಲಾ ಹಾವುಗಳು ಹರಿದಾಡಿದುವು. ಮಳೆ, ಬಿಸಿಲು, ಚಳಿ, ಗಾಳಿಗಳೆನ್ನದೆ ಘೋರ ತಪಸ್ಸುಮಾಡಿದರೂ ಬಾಹುಬಲಿಗೆ ಕೇವಲ



...ಎರಡು ಕೈಗಳನ್ನು ಮೇಲೆತ್ತಿ...ಭರತನು ಈ ರೀತಿ ನುಡಿದ ಆ ಮೇಲೆ...ಬಾಹುಬಲಿಗೆ ಕೇವಲ ಜ್ಞಾನ ಲಭಿಸಿತು

ಜ್ಞಾನ ಲಭಿಸಲಿಲ್ಲ. ರಾಜಾಧಿರಾಜರೆಲ್ಲಾ ಬಂದು ಬಾಹುಬಲಿಗೆ ಎರಗಿದರು. ಆದರೆ ಭರತಮಾತ್ರ ಬರಲಿಲ್ಲ. ಇದರಿಂದ ಬಾಹು

ಬಲಿಗೆ ವ್ಯಥೆಯಾಯಿತು. ತನ್ನ ಅಣ್ಣನಿಗೆ ಸೇರಿದ ನೆಲದ ಮೇಲೆ ನಿಂತು ತಾನು ತಪಸ್ಸು ಮಾಡುತ್ತಿರುವೆನಲ್ಲಾ ಎಂದು ಅವನು ನೊಂದನು. ಇದನ್ನು ತಿಳಿದ ಭರತನು ಸೋದರನ ಬಳಿಗೆ ಬಂದನು. ತಪಸ್ಸು ಮಾಡುತ್ತಿದ್ದ ಆ ವೀರಯೋಗಿಯನ್ನು ನೋಡಿ ತನ್ನ ಕಿರೀಟವನ್ನು ಕೆಳಗಿಟ್ಟನು. ಮುಂದೆ ಬಂದು ಎರಡು ಕೈಗಳನ್ನು ಮೇಲೆತ್ತಿ "ದೇವ ನೀನೇ ಕರುಣಿಸಿದ ನೆಲವಿದಲ್ಲವೆ? ಇಲ್ಲಿ ನನ್ನ ದೇನಿದೆ? ಚಿಂತೆಯನ್ನು ಬಿಟ್ಟು ಆತ್ಮಕಲ್ಯಾಣವನ್ನು ಸಾಧಿಸು" ಎಂದು ಬೇಡಿದನು. ಭರತನು ಈ ರೀತಿಯಲ್ಲಿ ನುಡಿದು ಎರಗಿದ ಮೇಲೆ ಬಾಹುಬಲಿಗೆ ಕೇವಲ ಜ್ಞಾನ ಲಭಿಸಿತು. ಆತ್ಮಕಲ್ಯಾಣ ವನ್ನು ಸಾಧಿಸಿ ಮುಕ್ತಿಪಡೆದನು.

ತ್ಯಾಗಿಯೂ ವೀರನೂ ತಪಸ್ವಿಯೂ ಮಹಾತ್ಮನೂ ಆದ ತನ್ನ ಸೋದರನ ನೆನಪಿಗಾಗಿ ಭರತ ಪೌದನಾಪುರಿಯಲ್ಲಿ ಒಂದು ರತ್ನದ ಪ್ರತಿಮೆಯನ್ನು ಕಡೆಸಿದನು. ಆ ಪ್ರತಿಮೆಯ ಎತ್ತರ ಸುಮಾರು ೫೨೫ ಬಿಲ್ಲಿನಷ್ಟು. ಈ ಪ್ರತಿಮೆಯ ಆಕಾರದಲ್ಲಿಯೇ ಬಾಹುಬಲಿಯ ಅನೇಕ ವಿಗ್ರಹಗಳನ್ನು ನಾವು ಇಂದೂ ನೋಡ ಬಹುದು. ಮೈಸೂರು ಸಂಸ್ಥಾನದ ಹಾಸನ ಜಿಲ್ಲೆಯ ಶ್ರವಣ ಬೆಳುಗೊಳ ಜೈನರಿಗೆ ಪವಿತ್ರವಾದ ಯಾತ್ರಾಸ್ಥಳ. ಪ್ರೇಕ್ಷಕರಿಗೆ ಆಕರ್ಷಕವಾದ ಯಾತ್ರಾಸ್ಥಳ. ಸಹಸ್ರಾರು ಮಂದಿ ಪ್ರವಾಸಿಗರು ನಿತ್ಯವೂ ಇಲ್ಲಿಗೆ ಬರುತ್ತಲೇ ಇರುತ್ತಾರೆ. ಅಲ್ಲಿರುವ ಶ್ರೀ ಗೊಮ್ಮ ಟೇಶ್ವರ ದಿವ್ಯ ವಿಗ್ರಹವೇ ಇದಕ್ಕೆ ಕಾರಣ. ಬೆಳುಗೊಳದ ಈ ಗೊಮ್ಮಟೇಶ್ವರ ಪ್ರತಿಮೆ ಲೋಕವಿಖ್ಯಾತವಾದುದು.

೨

ಶ್ರವಣಬೆಳುಗೊಳದ ಹೆಸರನ್ನು ಕೇಳದವರಿಲ್ಲ. ಅಂದವಾದ ಪ್ರಕೃತಿ ಸೌಂದರ್ಯ, ಉತ್ತಮವಾದ ವಾಯುಗುಣ, ಇಷ್ಟಕ್ಕೇ

ಈ ಊರು ಪ್ರಸಿದ್ಧಿಯಲ್ಲಿ. ಇಲ್ಲಿರುವ ಪುರಾತನ ಬಸದಿಗಳೂ ಅತ್ಯಂತ ಸುಂದರವಾಗಿವೆ. ಈ ಊರಿನಲ್ಲಿರುವ ಶ್ವೇತ ಸರೋವರ ಎಂದರೆ ಬೆಳುಗೊಳ ಬಹು ರಮ್ಯವಾಗಿದೆ. ಊರಿನ ಎರಡು ಕಡೆ ಗಳಲ್ಲೂ ಎರಡು ಬಾಹುಗಳಂತೆ ಬೆಟ್ಟಗಳು ಹಬ್ಬಿವೆ. ಕೃಷ್ಣರಾಜ ಪೇಟೆ ಮತ್ತು ಚನ್ನರಾಯಪಟ್ಟಣ ಈ ಎರಡು ಮಾರ್ಗಗಳಲ್ಲಿಯೂ ಇಲ್ಲಿಗೆ ಬರಬಹುದು. ರಸ್ತೆಯ ಎರಡು ಕಡೆಗಳಲ್ಲೂ ಮನೋಹರ ವಾದ ಕೆರೆಗಳು ಮನಸ್ಸನ್ನು ಮುದಗೊಳಿಸುತ್ತವೆ. ಹಸಿರು ತೋಟ ಗಳೂ ಹೊಲಗದ್ದೆಗಳೂ ಸ್ವರ್ಗ ಸಮಾನವಾಗಿ ತೋರುತ್ತವೆ. ಶ್ರವಣಬೆಳುಗೊಳದ ಸುತ್ತಲೂ ಸೊಂಪಾದ ತೋಟಗಳು ಕವಿದು ಕೊಂಡಿವೆ. ಇಂದ್ರಗಿರಿ ಮತ್ತು ಚಂದ್ರಗಿರಿಗಳಂತೂ ಆಕಾಶವನ್ನೇ ಹೊತ್ತು ನಿಂತಿವೆಯೋ ಎನ್ನುವಂತೆ ತೋರುತ್ತವೆ. ಇಂದ್ರಗಿರಿ ಒಂದೇ ಬಂಡೆಯಾದರೂ ದೊಡ್ಡ ಪರ್ವತದಂತಿದೆ. ಇದರ ತುದಿಯಲ್ಲೇ ಶ್ರೀ ಗೊಮ್ಮಟೇಶ್ವರ ಮಹಾಪ್ರತಿಮೆ ಇರು ವುದು. ಈ ಗೊಮ್ಮಟೇಶ್ವರನೇ ಅಣ್ಣನಿಗೆ ರಾಜ್ಯಕೋಶಾದಿ ಗಳನ್ನೆಲ್ಲ ಧಾರೆ ಎರೆದು ಬಂದು ತಪಸ್ಸಿಗೆ ನಿಂತ ಬಾಹುಬಲಿ ದೇವ. ಈ ದೊಡ್ಡ ವಿಗ್ರಹವನ್ನು ಕಡೆಸಿದವನು ಗಂಗ ಮಂತ್ರಿಯಾದ ಚಾವುಂಡರಾಯ. ಸ್ಥಳ ಪುರಾಣದಲ್ಲಿ ಒಂದು ಕತೆ ಬರುತ್ತದೆ—

ದಕ್ಷಿಣ ಮಥುರಾ ಪಟ್ಟಣದಲ್ಲಿ ಹಿಂದೆ ರಾಚಮಲ್ಲನೆಂಬ ರಾಜ ನಿದ್ದನು. ಅವನಿಗೆ ದೈವ ಭಕ್ತನೂ ಮಹಾ ಪಂಡಿತನೂ ಆದ ಚಾವುಂಡರಾಯನೆಂಬ ಮಂತ್ರಿಯಿದ್ದನು. ಇವನ ತಾಯಿ ಕಾಳಿ ಕಾಂಬೆ. ತಾಯಿಯಲ್ಲಿಯೂ ಚಾವುಂಡರಾಯನಿಗೆ ಅಪಾರ ಭಕ್ತಿ. ಈಕೆಗೆ ಪುರಾಣ ಪುಣ್ಯಕತೆಗಳೆಂದರೆ ಇನ್ನಿಲ್ಲದ ಮಮತೆ; ಭಕ್ತಿ. ಈ ಕಾಲಿಕಾಂಬೆಯೂ ದೈವಭಕ್ತೆ, ಶ್ರದ್ಧಾ ಜೀವಿ. ಒಮ್ಮೆ ಜಿನಸೇನ ರೆಂಬ ಮುನಿಗಳು ಈಕೆಗೆ ಪೌದನಾಪುರಿಯ ಕತೆಯನ್ನು ಹೇಳಿದರು.

ಅಲ್ಲಿ ಭರತ ಚಕ್ರವರ್ತಿಯಿಂದ ನಿರ್ಮಿಸಲ್ಪಟ್ಟ ಬಾಹುಬಲಿಯ ವಿಗ್ರಹದ ವಿಷಯವನ್ನು ಕೇಳಿದಳು. ಆ ವಿಗ್ರಹವನ್ನು ಹೇಗಾದರೂ ನೋಡಬೇಕೆಂಬ ಕುತೂಹಲವುಂಟಾಯಿತು. ಆ ದಿವ್ಯಮೂರ್ತಿಯ



ತಾಯಿಯನ್ನೂ ಜಿನಸೇನ ಮುನಿಗಳನ್ನೂ ಕರೆದುಕೊಂಡು ಚಾವುಂಡರಾಯ ಯಾತ್ರೆ ಹೊರಟನು

ದರ್ಶನವನ್ನು ಪಡೆಯದ ಹೊರತು ತಾನು ಅನ್ನ ಆಹಾರಾದಿಗಳನ್ನು ಸೇವಿಸುವುದಿಲ್ಲವೆಂದು ಹಟ ಹಿಡಿದಳು. ತಾಯಿಯೆಂದರೆ ಪರ ದೈವವೆಂದು ತಿಳಿದಿದ್ದ ಚಾವುಂಡರಾಯ ಆಕೆಯ ಇಚ್ಛೆಯನ್ನು ನೆರ ವೇರಿಸಲೇ ಬೇಕಾಯಿತು. ತಾಯಿಯನ್ನೂ ಜಿನಸೇನ ಮುನಿ ಗಳನ್ನೂ ಕರೆದುಕೊಂಡು ಯಾತ್ರೆ ಹೊರಟನು. ಜಿನಸೇನಾ ಚಾರ್ಯರು ಚಾವುಂಡರಾಯನ ಗುರುಗಳು. ದಾರಿಯುದ್ದಕ್ಕೂ ಅನೇಕ ಪುಣ್ಯಕತೆಗಳನ್ನು ಹೇಳುತ್ತಿದ್ದರು. ಅಲ್ಲಲ್ಲಿ ಸಿಗುವ ಅನೇಕ

ಪುಣ್ಯ ಸ್ಥಳಗಳನ್ನು ಪರಿಚಯಮಾಡಿಕೊಡುತ್ತಿದ್ದರು. ಹೀಗೆಯೇ ಬೇಸರವಿಲ್ಲದಂತೆ ದಾರಿಸಾಗಿತು.

ಈ ಮೂವರೂ ಪ್ರಯಾಣ ಮಾರ್ಗದಲ್ಲಿ ಬೆಳುಗೊಳಕ್ಕೆ ಬಂದರು. ಚಂದ್ರಗಿರಿಯ ಮೇಲೆ ಅನೇಕ ಪುರಾತನ ಬಸದಿಗಳಿದ್ದುವು. ಅವುಗಳಲ್ಲೊಂದರಲ್ಲಿ ತಂಗುವುದೆಂದು ನಿಶ್ಚಯಿಸಿ, ಆ ರಾತ್ರಿಯನ್ನು ಅಲ್ಲಿ ಕಳೆದರು. ಅವರು ತಂಗಿದ್ದುದು ಚಂದ್ರಗುಪ್ತ ಬಸದಿಯಲ್ಲಿ. ಮಲಗಿರಬೇಕಾದರೆ ಚಾವುಂಡರಾಯನಿಗೆ ಒಂದು ವಿಚಿತ್ರ ಕನಸಾಯಿತು. ದೇವತೆಯೊಂದು ಕಾಣಿಸಿಕೊಂಡು— "ಪೌದನಾಪುರಿಯ ಸುತ್ತಲೂ ಭಯಂಕರ ಕಾಡುಹಬ್ಬಿದೆ. ಅದರಲ್ಲಿ ಅಪಾಯಕಾರಿ ವಿಷಜಂತುಗಳು ಮನೆ ಮಾಡಿಕೊಂಡಿವೆ. ದೈವ ಭಕ್ತನಾದ ನಿನಗೆ ಬಾಹುಬಲಿಸ್ವಾಮಿಯು ಎದುರುಬೆಟ್ಟವಾದ



ಎತ್ತರವಾದ ಒಂದು ಬಂಡೆಯ ಮೇಲೆ ನಿಂತು ಬಾಹುಬಲಿಯನ್ನೇ ಪ್ರಾರ್ಥಿಸುತ್ತಾ ದಕ್ಷಿಣ ದಿಕ್ಕಿಗೆ ಬಾಣಪ್ರಯೋಗ ಮಾಡಿದನು

ಇಂದ್ರಗಿರಿಯಲ್ಲಿ ದರ್ಶನ ಕೊಡುವನು. ನಾಳೆ ಚಂದ್ರಗಿರಿಯಿಂದ ನಿಂತು ಆ ಬೆಟ್ಟಕ್ಕೆ ಬಾಣಪ್ರಯೋಗಮಾಡು. ಆ ಬಾಣ ಬೀಳುವ ನೆಲೆಯಲ್ಲಿಯೇ ಬಾಹುಬಲಿಸ್ವಾಮಿ ಇರುವನು." ಎಂದು ಹೇಳಿ

ದೇವತೆ ಮಾಯವಾಯಿತು. ಬೆಳಗಾದಾಗ ಕಾಲಿಕಾಂಬೆಯೂ ಜಿನ ಸೇನಾಚಾರ್ಯರೂ ತಮಗೂ ಹಾಗೆಯೇ ಕನಸಾಯಿತೆಂದರು.

ಮರುದಿನ ಚಾವುಂಡರಾಯನು ಕೊಳದಲ್ಲಿ ಮಿಂದು ಮಡಿ ಯುಟ್ಟು ದೇವತಾ ಪ್ರಾರ್ಥನೆ ಮಾಡಿದನು. ಎತ್ತರವಾದ ಒಂದು ಬಂಡೆಯ ಮೇಲೆ ನಿಂತು ಬಾಹುಬಲಿಯನ್ನೇ ಪ್ರಾರ್ಥಿಸುತ್ತ ದಕ್ಷಿಣ ದಿಕ್ಕಿಗೆ ಬಾಣಪ್ರಯೋಗಮಾಡಿದನು. ಕ್ಷಣಮಾತ್ರದಲ್ಲಿ ಆ ಬಾಣವು ಜಿಗಿದು ಇಂದ್ರಗಿರಿಯಲ್ಲಿ ಹೋಗಿ ನಾಟಿತು. ಚಾವುಂಡರಾಯನು ಇಂದ್ರಗಿರಿಯನ್ನು ಹತ್ತಿ ನೋಡಿದನು. ತೆಂಗಿನ ಮರದಷ್ಟು ಎತ್ತರ ವಾದ ದೊಡ್ಡ ಬಂಡೆಯೊಂದರ ಪಾದದಲ್ಲಿ ಬಾಣ ನಾಟಿಕೊಂಡಿತ್ತು. ಚಾವುಂಡರಾಯ ನಿಂತು ಯೋಚಿಸಿದನು. ಭೀಷಣಾಕಾರದ ಬಂಡೆ ಯನ್ನು ಕಂಡು ಅವನಿಗೆ ಏನೋ ಒಂದು ವಿಧವಾದ ರೋಮಾಂಚನ ವುಂಟಾಯಿತು. ಬಾಹುಬಲಿಸ್ವಾಮಿ ಇದರಲ್ಲಿಯೇ ಇರಬಹು ದೆಂದು ಅವನು ಊಹಿಸಿದನು. ಬಂಡೆಯನ್ನು ಒಡೆಸಿದರೆ ವಿಗ್ರಹಕ್ಕೆ ತೊಂದರೆಯಾದೀತು. ಅದಕ್ಕಾಗಿ ಅವನು ಜಾಣರಾದ ಶಿಲ್ಪಿ ಗಳನ್ನು ಕರೆಸಿ ಬಂಡೆಯನ್ನು ಚಾಣಗಳಿಂದ ಕೊರೆಸಿದನು. ಒಂದು ಶುಭ ಲಗ್ನದಲ್ಲಿ ಬಾಹುಬಲಿಸ್ವಾಮಿ ಚಾವುಂಡರಾಯನಿಗೂ ಕಾಲಿ ಕಾಂಬೆಗೂ ಗುರು ಜಿನಸೇನಾಚಾರ್ಯನಿಗೂ ದರ್ಶನವಿತ್ತನು.

ಬಾಹುಬಲಿಸ್ವಾಮಿಯ ದರ್ಶನವನ್ನು ಪಡೆದ ಮೇಲೆ ಚಾವುಂಡರಾಯನಿಗೆ ಒಂದು ಮನಸ್ಸಾಯಿತು. ತಾನು ಕಂಡ ದೇವ ಮೂರ್ತಿಯನ್ನು ಅಲ್ಲಿಯೇ ಕಡೆಸಬಾರದೇಕೆ? ಎನಿಸಿತು. ಈ ಕಾರ್ಯಕ್ಕಾಗಿ ನಿಪುಣರಾದ ಶಿಲ್ಪಿಗಳು ಬೆಳುಗೊಳಕ್ಕೆ ಬಂದರು. ಕನ್ನಡ ನಾಡಿನ ಶಿಲ್ಪಿಗಳೆಂದರೆ ಸಾಮಾನ್ಯರೆ? ಎಂಥ ಜಡವಸ್ತು ವಿನಲ್ಲಿಯೂ ಜೀವಕಳೆಯನ್ನು ತರಬಲ್ಲರು. ಕಲ್ಲು ಮಾತಾಡು ವಂತೆ ಮಾಡಬಲ್ಲರು. ಚಾವುಂಡರಾಯನು ಆಶ್ಚರ್ಯಪಡುವಂತೆ

ಆ ಪ್ರತಿಮೆಯನ್ನು ಕಡೆದು ನಿಲ್ಲಿಸಿದರು. ಅತ್ಯಂತ ಸುಂದರವೂ



ಜಾಣರಾದ ಶಿಲ್ಪಿಗಳನ್ನು ಕರೆಸಿ ಬಂಡೆಯನ್ನು ಚಾಣಗಳಿಂದ ಕೊರೆಸಿದನು

ಭವ್ಯವೂ ಆದ ಆ ವಿಗ್ರಹವನ್ನು ಕಂಡ ಚಾವುಂಡರಾಯ ತನ್ನ ಕಾರ್ಯಕ್ಕೆ ಹೆಮ್ಮೆ ಪಟ್ಟ. ಅಂದು ಅವನು ಹೆಮ್ಮೆ ಪಟ್ಟುದರಲ್ಲಿ

ಆಶ್ಚರ್ಯವೇನಿದೆ? ಇಂದು ಲೋಕವೇ ಬೆಳುಗೊಳದ ಈ ಗೊಮ್ಮಟೇಶ್ವರ ವಿಗ್ರಹಕ್ಕೆ ಬೆರಗಾಗಿ ತಲೆದೂಗುತ್ತಿದೆ. ಅಂದಿನ ಶಿಲ್ಪಿಗಳ ಕೌಶಲ್ಯಕ್ಕೆ ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಿದೆ.

ಇಂಥ ಮಹಾಕಾರ್ಯವನ್ನು ಸಾಧಿಸಿದ ಚಾವುಂಡರಾಯನಿಗೆ ಸ್ವಾಭಾವಿಕವಾಗಿಯೇ ಗರ್ವಮೂಡಿತು. ಈ ಗರ್ವವನ್ನು ಮುರಿಯಬೇಕೆಂದು ಕನಸಿನಲ್ಲಿ ಕಾಣಿಸಿಕೊಂಡ ಆ ದೇವತೆ ಮನಸ್ಸುಮಾಡಿದಳು. ಬಾಹುಬಲಿ ವಿಗ್ರಹದ ಮೇಲೆ ಎಷ್ಟು ಅಭಿಷೇಕ ಮಾಡಿದರೂ ಕುತ್ತಿಗೆಯನ್ನು ಬಿಟ್ಟು ಕೆಳಗಿಳಿಯದಂತೆ ಮಾಡಿದಳು. ತನ್ನ ಕೆಲಸವೆಲ್ಲ ವ್ಯರ್ಥವಾಯಿತಲ್ಲ ಎಂದು ಚಾವುಂಡರಾಯ ಮರುಗಿದನು. ಪೂರ್ಣಾಭಿಷೇಕವನ್ನು ನೋಡುವ ಭಾಗ್ಯ ತನಗಿಲ್ಲವಾಯಿತೇ ಎಂದು ಅವನು ಕೊರಗಿದನು. ಅವನ ಪಶ್ಚಾತ್ತಾಪವನ್ನು ಕಂಡು ದೇವಿಗೆ ಕರುಣೆ ಮೂಡಿತು. ಓರ್ವ ಮುದುಕಿಯ ರೂಪವನ್ನು ತಾಳಿ ಅಲ್ಲಿ ಕಾಣಿಸಿಕೊಂಡಳು. ಬಿಳಿಯ ಗುಳ್ಳಕಾಯಿಯಂಥ ಒಂದು ಸಣ್ಣ ಬಟ್ಟಲಲ್ಲಿ ಅಭಿಷೇಕವನ್ನು ಹಿಡಿದು ತಂದ ಮುದುಕಿಯನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಅಭಿಷೇಕವನ್ನು ಮಾಡಲು ಚಾವುಂಡರಾಯನು ಅಪ್ಪಣೆಕೊಟ್ಟನು. ಎಲ್ಲರೂ ನೋಡುತ್ತಿದ್ದಂತೆಯೇ ಅಭಿಷೇಕ ಅಕ್ಷಯವಾಯಿತು. ಇಷ್ಟೇ ಅಲ್ಲದೆ ಬೆಟ್ಟವೆಲ್ಲ ಬೆಳದಿಂಗಳಿಂದ ಕೂಡಿದಂತೆ ಬೆಳ್ಳಗಾಯಿತು. ಹಾಲಿನಲ್ಲಿ ಮುಳುಗಿ ಎದ್ದಂತಾಯಿತು. ಬೆಳ್ಳಿಯ ಬೆಟ್ಟದಂತೆ ತೋರಿತು. ಮುದುಕಿಯ ಮಹತ್ವಕ್ಕೆ ಚಾವುಂಡರಾಯ ಬೆರಗಾಗಿ ಹೋದ. ಭಯಭಕ್ತಿಗಳಿಂದ ಅವಳ ಪಾದಕ್ಕೆರಗಿ ಕಾಪಾಡಬೇಕೆಂದು ಬೇಡಿದ. ದೇವಿ ಪ್ರತ್ಯಕ್ಷಳಾಗಿ ಕರುಣಿಸಿದಳು. ಬಾಹುಬಲಿಯ ಸೇವಾಕಾರ್ಯಕ್ಕೆ ತಕ್ಕ ಏರ್ಪಾಟನ್ನು ಮಾಡುವಂತೆ ತಿಳಿಸಿದಳು. ಬೆಟ್ಟದ

ಬುಡದಲ್ಲಿ ಒಂದು ಊರನ್ನು ಕಟ್ಟಿಸುವಂತೆಯೂ ಹೇಳಿ ಮಾಯವಾದಳು.



ಆ ದೇವತೆ ಮುದುಕಿಯ ರೂಪ ತಾಳಿ ಬಿಳಿಯ ಗುಳ್ಳಕಾಯಿಯಂಥ ಬಟ್ಟಲಲ್ಲಿ ಅಭಿಷೇಕ ಹಿಡಿದು ತಂದಳು

ಚಾವುಂಡರಾಯ ಸುಂದರವಾದ ಒಂದು ಊರನ್ನು ಕಟ್ಟಿಸಿದ. ಬಿಳಿಯ ಗುಳ್ಳಕಾಯಿಯಂಥ ಬಟ್ಟಲಿನಲ್ಲಿ ಅಭಿಷೇಕವನ್ನು ತಂದು ದೇವಿ ಕಾಣಿಸಿಕೊಂಡುದರಿಂದ ಊರಿಗೆ 'ಬಿಳಿಯಗುಳ್ಳ' ಅಥವಾ 'ಬೆಳುಗುಳ' ಎಂದು ಹೆಸರಿಟ್ಟನಂತೆ. ಚಾವುಂಡರಾಯನು ಅಲ್ಲಿಯೇ ಒಂದು ಮಠವನ್ನು ಸ್ಥಾಪಿಸಿದನು. ತನ್ನ ಗುರುವಾದ ಶ್ರೀ ನೇಮಿಚಂದ್ರನನ್ನು ಅಲ್ಲಿನ ಪೀಠಾಧಿಕಾರಿಯನ್ನಾಗಿ ಮಾಡಿದನು. ಮುದುಕಿಯ ರೂಪಿನಲ್ಲಿ ಬಂದ ದೇವಿಯ ಜ್ಞಾಪಕಾರ್ಥವಾಗಿ ಒಂದು ಪ್ರತಿಮೆಯನ್ನು ಮಾಡಿಸಿ ಗೊಮ್ಮಟೇಶ್ವರ ವಿಗ್ರಹದ ಎದುರು ಸ್ಥಾಪಿಸಿದನು.

೩

ನಮ್ಮ ಕನ್ನಡ ನಾಡು ಶಿಲ್ಪ ಕಲೆಗೆ ಪ್ರಸಿದ್ಧವಾಗಿದೆ. ನಮ್ಮ ಪೂರ್ವಿಕರು ಅನೇಕ ಸುಂದರವಾದ ಗುಡಿಗೋಪುರಗಳನ್ನು ಕಟ್ಟಿ ನಾಡಿನ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಬೇಲೂರು, ಹಳೆಯ ಬೀಡು, ಸೋಮನಾಥಪುರ ಮುಂತಾದ ಕಡೆಗಳಲ್ಲಿ ಶಿಲ್ಪಕಲಾ ಕೌಶಲ್ಯದಿಂದ ಕೂಡಿದ ದೇವಾಲಯಗಳಿವೆ. ಶ್ರವಣಬೆಳುಗೊಳ ದಲ್ಲಿಯೂ ಹೀಗೆಯೇ ಅನೇಕ ಸುಂದರ ಜೈನ ದೇವಾಲಯಗಳಿವೆ. ಇವೆಲ್ಲಕ್ಕೂ ಮಿಗಿಲಾಗಿ ಶ್ರೀ ಗೊಮ್ಮಟೇಶ್ವರ ವಿಗ್ರಹ ಶೋಭಿಸು ತ್ತಿದೆ.

ಗೊಮ್ಮಟೇಶ್ವರ ವಿಗ್ರಹವನ್ನು ಕಡೆಸಿದ ಚಾವುಂಡರಾಯನಿಗೆ 'ಗೊಮ್ಮಟ' ಎಂಬ ಇನ್ನೊಂದು ಹೆಸರಿದ್ದಿತಂತೆ. ಆದುದರಿಂದಲೇ ಅವನು ಕಡೆಸಿದ ಈ ವಿಗ್ರಹಕ್ಕೆ ಗೊಮ್ಮಟೇಶ್ವರ ಎಂದು ಹೆಸರಾಯಿ ತೆಂದು ಹೇಳುತ್ತಾರೆ. ಶ್ರವಣಬೆಳುಗೊಳ ಇಷ್ಟು ಪ್ರಸಿದ್ಧವಾಗಲು ಚಾವುಂಡರಾಯನೇ ಕಾರಣ. ಗುಡಿಗೋಪುರಾದಿಗಳನ್ನು ಕಟ್ಟಿಸಿ ತನ್ನ ಹೆಸರನ್ನೂ ಅಮರಗೊಳಿಸಿಕೊಂಡಿದ್ದಾನೆ.

ಶ್ರವಣಬೆಳುಗೊಳ ಸುಂದರವಾದ ಊರು. ಓರಣವಾದ ಬೀದಿಗಳು, ಒಪ್ಪವಾದ ಓಣಿಗಳು, ಅಂದವಾದ ಮನೆಗಳು ಇಲ್ಲಿವೆ. ಊರನ್ನು ಪ್ರವೇಶಿಸಿದ ಕೂಡಲೇ ಇಂದ್ರಗಿರಿ ನಮ್ಮ ಕಣ್ಣನ್ನು ಸೆಳೆ ಯುತ್ತದೆ. ಮೊದಲು ಅದನ್ನು ಹತ್ತಿಹೋಗಿ ಶ್ರೀ ಗೊಮ್ಮಟೇಶ್ವರ ದರ್ಶನವನ್ನು ಪಡೆದು ಬರಬೇಕೆನಿಸುತ್ತದೆ. ವಿಶಾಲವಾಗಿಯೂ ಅತ್ಯಂತ ಎತ್ತರವಾಗಿಯೂ ತೋರುವ ಆ ಗಿರಿ ನಮ್ಮನ್ನು ದೇವ ಲೋಕಕ್ಕೆ ಕರೆದೊಯ್ಯುವಂತೆ ಬರಮಾಡಿಕೊಳ್ಳುತ್ತದೆ. ಈ ಗಿರಿಯ

ಪಾದದಲ್ಲಿಯೇ ವಿಶಾಲವಾದ ಪುಷ್ಕರಿಣಿಯಿದೆ. ಇದರಲ್ಲಿ ಗಿರಿಯ ಪ್ರತಿಬಿಂಬ ಬಹು ರಮ್ಯವಾಗಿ ತೋರುತ್ತದೆ. ಬೆಟ್ಟದ ಬುಡದ



ಬೆಟ್ಟವನ್ನು ಏರುವಾಗ ಈ ಹೆಬ್ಬಾಗಿಲು ದಾಟಿ ಮುಂದುವರಿಯಬೇಕು

ವರೆಗೂ ಊರು ಚಾಚಿಕೊಂಡಿದೆ. ಅಲ್ಲಿಂದ ಮೆಟ್ಟಲುಗಳನ್ನು ಹತ್ತ ತೊಡಗಿದರೆ ಸ್ವಲ್ಪ ಎತ್ತರದಲ್ಲಿಯೇ ಜಾರುಗುಪ್ಪೆ ಬಸದಿ ದೊರೆ ಯುತ್ತದೆ. ಅಲ್ಲಿರುವ ಜಾರುಗುಪ್ಪೆಗಳು ಬಹಳ ಉದ್ದವಾಗಿವೆ. ಬೆಟ್ಟವನ್ನು ಇಳಿದು ಬರುವಾಗ ಕೆಲವರು ವಿನೋದಕ್ಕಾಗಿ ಜಾರು ವುದೂ ಉಂಟು. ಇಲ್ಲಿಂದ ಮೇಲೆ ಒಂದು ಹೆಬ್ಬಾಗಿಲನ್ನು ದಾಟಿ ಮುಂದುವರಿಯಬೇಕು. ಒಂದೇ ಬಂಡೆಯ ಮೈಯನ್ನು ಕೊರೆದು ಮೆಟ್ಟಲುಗಳನ್ನು ಮಾಡಿದ್ದಾರೆ. ಇದನ್ನು ನೋಡಿದರೆ ಆಕಾಶಕ್ಕೆ ಏಣಿಯನ್ನು ಕಟ್ಟಿದಂತೆ ತೋರುತ್ತದೆ. ಮೇಲೆ ಹೋದಂತೆಲ್ಲಾ ಪ್ರದೇಶ ಕಡಿದಾಗುತ್ತಾ ಹೋಗುತ್ತದೆ. ೩೫೦೦ ಅಡಿ ಎತ್ತರ

ವಿರುವ ಈ ಬೆಟ್ಟವನ್ನು ಹತ್ತಬೇಕಾದರೆ ಸ್ವಲ್ಪ ಆಯಾಸವು ತೋರುತ್ತದೆ. ಒಂದೇ ಬಂಡೆಯಾದುದರಿಂದ ಮತ್ತೂ ಪ್ರಯಾಸ ವಾಗಿ ಕಂಡುಬರುತ್ತದೆ. ಆದರೂ ೬೦೦ ಸೋಪಾನಗಳನ್ನು ಮುಗಿಸಿ ಬರುವುದರಲ್ಲಿ ಮೇಲಿನ ಸುಂದರ ದೃಶ್ಯಗಳು ನಮ್ಮನ್ನು ಆಕರ್ಷಿಸಿ ಬಿಟ್ಟಿರುತ್ತವೆ. ಬೆಟ್ಟದ ಮೇಲಿನ ಕೋಟೆಯ ಬಾಗಿಲನ್ನು ತಲಪುವುದರಲ್ಲಿ ತಣ್ಣನೆಯ ಗಾಳಿ ಬೀಸಿಬರುತ್ತದೆ. ಒಂದು ವಿಧ ವಾದ ಹರ್ಷವುಂಟಾಗಿ, ನಮ್ಮ ದಣಿವು ಮಾಯವಾಗುತ್ತದೆ.

ಕೋಟೆಯ ಬಾಗಿಲನ್ನು ದಾಟಿ ಮುಂದೆ ನಡೆದರೆ ಎಡಕ್ಕೆ ಒಂದು ಸಣ್ಣ ಬಸದಿ ಇದೆ. ಇದನ್ನು ಚತುರ್ವಿಂಶತಿ ಬಸದಿ ಎಂದು ಕರೆಯುತ್ತಾರೆ. ಸುಂದರವಾಗಿ ಕಟ್ಟಿರುವ ಇದರಲ್ಲಿ ಒಂದೇ ಕಲ್ಲಿನಿಂದ ಕೊರೆದಿರುವ ೨೪ ತೀರ್ಥಂಕರರ ಪ್ರತಿಮೆಗಳಿವೆ. ಇದರ ಪಕ್ಕದಲ್ಲಿಯೇ ಮತ್ತೊಂದು ಬಸದಿ ಇದೆ. ಇದನ್ನು ಒದೆ ಗಲ್ ಬಸದಿ ಎನ್ನುತ್ತಾರೆ. ಕಲ್ಲುಕಂಬಗಳನ್ನು ಒದೆಗಳಂತೆ ನಿಲ್ಲಿಸಿ ಬಹಳ ಚಮತ್ಕಾರದಿಂದ ಈ ಬಸದಿಯನ್ನು ಕಟ್ಟಿದ್ದಾರೆ. ಸುಮಾರು ಐದು ಅಡಿ ಎತ್ತರದ ಆದಿನಾಥ ಪ್ರತಿಮೆ ಇದರಲ್ಲಿದೆ. ಇದಕ್ಕೆ ತ್ರಿಕೂಟ ಚೈತ್ಯಾಲಯ ಎಂಬ ಇನ್ನೊಂದು ಹೆಸರೂ ಇದೆ. ಇದರ ದಕ್ಷಿಣಕ್ಕೆ ತುಸು ದೂರದಲ್ಲಿ ಮತ್ತೊಂದು ಬಸದಿ ಕಾಣು ತ್ತದೆ. ಅದರ ಎದುರಿನಲ್ಲಿ ಸುಂದರವಾದ ಮಾನಸ್ತಂಭವು ದೃಷ್ಟಿಯನ್ನು ಸೆಳೆಯುತ್ತದೆ. ಈ ಬಸದಿಯನ್ನು ಚಂದಣ್ಣನ ಬಸದಿ ಎಂದು ಕರೆದಿದ್ದಾರೆ. ಎರಡಡಿ ಎತ್ತರದ ಚಂದ್ರಪ್ರಭಾ ಸ್ವಾಮಿಯ ವಿಗ್ರಹ ಇದರಲ್ಲಿದೆ. ಚಂದಣ್ಣನ ಬಸದಿಯಿಂದ ಹಿಂದೆ ಬಂದರೆ ಮಂಟಪವೊಂದರ ನಡುವೆ ತೂಗಾಡುವ ಸ್ತಂಭವಿದೆ. ಇದನ್ನು ತ್ಯಾಗದ ಕಂಬವೆಂದು ಕರೆದಿದ್ದಾರೆ. ಅಂತರದಲ್ಲಿ ನೇತಾ ಡುವ ಈ ಕಂಬ ಎಂಥವರಿಗೂ ಆಶ್ಚರ್ಯವನ್ನುಂಟುಮಾಡುತ್ತದೆ.

ಹಿಂದೆ ಇದರ ತಳದಲ್ಲಿ ಕರವಸ್ತ್ರವನ್ನು ತೂರಿಸುವಷ್ಟು ಸ್ಥಳವಿದ್ದಿತು. ಅಷ್ಟು ಚಮತ್ಕಾರದಿಂದ ಅಂದಿನ ಶಿಲ್ಪಿಗಳು ಅದನ್ನು ನಿಲ್ಲಿಸಿದ್ದಾರೆ.



ಚಂದ್ರಣ್ಣನ ಬಸದಿಯ ಹಿಂದೆ ತೂಗಾಡುವ ಸ್ತಂಭ—ಇದೇ 'ತ್ಯಾಗದ ಕಂಬ'

ತ್ಯಾಗದ ಕಂಬದಿಂದ ನೇರವಾಗಿ ಮೇಲಕ್ಕೆ ಹೊರಡಬೇಕು. ಸುಂದರವಾಗಿ ಕಟ್ಟಿರುವ ಮೆಟ್ಟಲು ಸಾಲುಗಳನ್ನು ಹತ್ತಬೇಕು. ಮುಂದುವರಿಯುತ್ತಿದ್ದಂತೆಯೇ ಸ್ವಲ್ಪ ದೂರದಲ್ಲಿ ದೊಡ್ಡ ದ್ವಾರವೊಂದು ದೊರೆಯುತ್ತದೆ. ಇದು ಅಖಂಡ ಬಾಗಿಲು. ಒಂದೇ ಬಂಡೆಯಲ್ಲಿ ಈ ದ್ವಾರವನ್ನು ಚಾವುಂಡರಾಯನು ಕೊರೆಸಿದ್ದಾನೆ. ಇದರ ಎಡಬಲಗಳಲ್ಲಿ ಭರತ–ಬಾಹುಬಲಿಗಳ ಚಿತ್ರವಿದೆ. ಮೇಲು ಭಾಗದಲ್ಲಿ ಗಜಲಕ್ಷ್ಮಿಯ ಚಿತ್ರವಿದೆ.

ಅಖಂಡ ದ್ವಾರದಿಂದ ಮೆಟ್ಟಲುಗಳನ್ನೇರಿ ನಡೆದರೆ ಮತ್ತೊಂದು ದ್ವಾರ ದೊರೆಯುತ್ತದೆ. ಇದು ಗುಳಕಾಯಜ್ಜಿಯ ಬಾಗಿಲು. ಈ ಸ್ಥಳದಲ್ಲಿ ನಿಂತು ಗುಳಕಾಯಜ್ಜಿಯು ಚಾವುಂಡ

ರಾಯನ ಗರ್ವಭಂಗ ಮಾಡಿದಳಂತೆ. ಇಲ್ಲಿಗೆ ಸುತ್ತುವರಿ
ಪ್ರಾಕಾರ ಗೋಡೆ ಕಾಣಿಸುತ್ತದೆ. ಸ್ವಲ್ಪ ಮುಂದೆ ಮಹಾದ್ವಾರವು
ದೊರೆಯುತ್ತದೆ. ಇದನ್ನು ದಾಟಿ ಹೋದರೆ ಒಂದು ಚೈತ್ಯಾಲಯ
ಸಿಗುತ್ತದೆ. ನಾನಾ ಬಗೆಯ ಕೆತ್ತನೆಯ ಕೆಲಸಗಳು ಇದರ ಗೋ
ಗಳನ್ನು ಅಲಂಕರಿಸಿವೆ. ಮುಖಮಂಟಪದ ಮುಂದೆ ಸಿದ್ಧರ ಬಸದಿ
ಯೊಂದಿದೆ. ಇದರಲ್ಲಿ ಐದು ಅಡಿ ಎತ್ತರದ ಸಿದ್ಧ ಪರಮೇಷ್ಠಿಯ
ವಿಗ್ರಹವಿದೆ. ಈ ಮುಖಮಂಟಪದ ಮೇಲುಭಾಗದಲ್ಲಿ ಗುಳಕಾ
ಯಜ್ಜಿಯ ಪ್ರತಿಮೆಯಿದೆ. ದ್ವಾರದ ಅಕ್ಕಪಕ್ಕಗಳಲ್ಲಿ ಶಿಲೆಯಿಂದಲೇ
ಮಾಡಿದ ದ್ವಾರಪಾಲಕರಿರುವರು.

ಈ ವೇಳೆಗಾಗಲೇ ನಾನಾ ಬಗೆಯ ಬಸದಿಗಳನ್ನೂ ಚೈತ್ಯಾ
ಲಯಗಳನ್ನೂ ಸ್ತಂಭಗಳನ್ನೂ ನೋಡಿ ಸೋತಿರುತ್ತೇವೆ. ಮೆಟ್ಟಲು
ಗಳನ್ನು ಹತ್ತಿ, ದ್ವಾರಗಳನ್ನು ಹೊಕ್ಕು, ಅನೇಕ ಸುಂದರ ಪ್ರತಿಮೆ
ಗಳನ್ನು ಕಂಡಿರುತ್ತೇವೆ. ಬೆಟ್ಟದ ತುದಿಯ ಸರೋವರದ ತಿಳಿನೀರನ್ನು
ಕುಡಿದು ಅತ್ತ ಬಂದಿರುತ್ತೇವೆ. ಎಲ್ಲೆಲ್ಲಿಯೂ ಸುಂದರ ಕಟ್ಟಡ
ಗಳು ಕಾಣುವುವೇ ಹೊರತು ಗೊಮ್ಮಟೇಶ್ವರನ ದರ್ಶನವೇ ಆಗಿರು
ವುದಿಲ್ಲ. ನಿರಾಶರಾಗುವುದು ಬೇಡ. ಸಹನೆಯಿಂದ ಸ್ವಲ್ಪ
ಮುಂದೆ ದ್ವಾರವೊಂದನ್ನು ಪ್ರವೇಶಿಸಿದರೆ ಇದ್ದಕ್ಕಿದ್ದಂತೆಯೇ
ನಮ್ಮೆದುರು ಆಕಾಶ ಕಳಚಿ ಬಿದ್ದಂತಾಗುತ್ತದೆ. ಶ್ರೀ ಗೊಮ್ಮಟೇ
ಶ್ವರ ಮಹಾಮೂರ್ತಿ ಪ್ರಸನ್ನನಾಗಿ ನಮ್ಮೆದುರು ನಿಂತು 'ಬಂದಿರಾ?'
ಎಂದು ಕೇಳಿದಂತಾಗುತ್ತದೆ. ಆ ಭವ್ಯಾಕೃತಿಯ ಎದುರು ನಾವು
ಮೂಕರಾಗಿ ಹೋಗುತ್ತೇವೆ.

೪

ಶ್ರೀ ಗೊಮ್ಮಟೇಶ್ವರ ವಿಗ್ರಹ ಜಗತ್ತಿನಲ್ಲಿಯೇ ಅಪೂರ್ವ
ವಾದುದೆಂದು ಹೇಳುತ್ತಾರೆ. ಇದನ್ನು ನಿರ್ಮಿಸಿದ ಶಿಲ್ಪಿ ಅತ್ಯಂತ

ಚತುರನೇ ಇರಬೇಕು. ಸಾಮಾನ್ಯರ ಕಲ್ಪನೆಗೂ ನಿಲುಕದಂಥ ಭವ್ಯವಾದ ಈ ವಿಗ್ರಹವನ್ನು ಅವನು ಕಡೆಯಬೇಕಾದರೆ ಅವನ ಕೌಶಲ್ಯ ಅಪ್ರತಿಮವಾದುದೇ ಸರಿ. ದೊಡ್ಡ ಆಕಾರದ ಬಂಡೆಯಲ್ಲಿ ದೊಡ್ಡ ಪ್ರಮಾಣದಲ್ಲಿಯೇ ಇದನ್ನು ಕಡೆಯಲಾಗಿದೆ. ಸುಮಾರು ೫೮ ಅಡಿ ಎತ್ತರವಿರುವ ಇದರ ಯಾವ ಅಂಗದಲ್ಲಿಯೂ ಸೌಂದರ್ಯ ಕೆಟ್ಟಿಲ್ಲ. ಪ್ರಮಾಣ ಬದ್ಧವಾಗಿ, ನಯವಾಗಿ, ಮನೋಹರವಾಗಿ ಕಡೆಯಲಾಗಿದೆ. ಎತ್ತರಕ್ಕೆ ತಕ್ಕ ಗಾತ್ರ, ಗಾತ್ರಕ್ಕೆ ತಕ್ಕ ಗಾಂಭೀರ್ಯ, ಆ ಗಾಂಭೀರ್ಯಕ್ಕೆ ತಕ್ಕ ತೇಜಸ್ಸು– ಇದು ಕಲ್ಲಿನ ವಿಗ್ರಹವೆಂದು ಹೇಳುವುದಕ್ಕೆ ಬಾಯಿ ಬಾರದು. ಇನ್ನೇನು ಗೊಮ್ಮಟದೇವ ನಮ್ಮೆದುರು ನಡೆದು ಬಂದಾನೋ ಎನ್ನುವಂತಿದೆ. ಪ್ರತಿಮೆಯ ಮುಂದೆ ನಿಂತರೇ ಸಾಕ್ಷಾತ್ ಬಾಹುಬಲಿಯೇ ಕಣ್ಣೆದುರು ಮೂಡಿದಂತಾಗುತ್ತದೆ. ಮೈ ಮನವೆಲ್ಲಾ ಪುಳಕಗೊಳ್ಳುತ್ತವೆ. ಈ ಜಗತ್ತಿನಲ್ಲಿ ತನಗೆ ಏನೂ ಬೇಡವೆಂಬಂತೆ, ಈ ದುಃಖಮಯ ಜೀವನಕ್ಕೆ ಬೇಸತ್ತು ವೈರಾಗ್ಯವನ್ನು ತಾಳಿದಂತೆ ಬಾಹುಬಲಿ ಸ್ವಾಮಿ ಎಲ್ಲಿಯೋ ತನ್ನ ದೃಷ್ಟಿಯನ್ನು ಚೆಲ್ಲಿ ನಿಂತಿದ್ದಾನೆ. ಯಾವುದೋ ಭವ್ಯ ಸ್ವಪ್ನದಲ್ಲಿ ತೇಲಿಹೋಗಿದ್ದಾನೆ. ಅವನ ನಿಲುವಿನಲ್ಲಿ ನಿಶ್ಚಲತೆ ಎದ್ದು ತೋರುತ್ತದೆ. ದೃಢತೆ ಕಣ್ಣಿಗೆ ಕಟ್ಟುತ್ತದೆ. ನೀಳವಾದ ಬಾಹುಗಳು, ಸಣ್ಣದಾದ ನಡು, ದುಂಡಾದ ಮುಖ, ವಿಶಾಲವಾದ, ಮನೋಹರವಾದ ಕಣ್ಣುಗಳು, ಮುದ್ದಾದ ಮೂಗು, ನೀಳವಾದ ಕಿವಿಗಳು, ಗುಂಗುರು ಗುಂಗುರಾದ ಉಂಗುರಗೂದಲು, ವಿಸ್ತಾರವಾದ ಎದೆ, ಚಾಚಿಕೊಂಡ ಭುಜ, ಭಾವ ಮಗ್ನವಾದ ದೃಷ್ಟಿ— ಬಾಹುಬಲಿಯನ್ನು ನೋಡುತ್ತ ನಿಂತಂತೆ ನಾವು ಮೈ ಮರೆಯುತ್ತೇವೆ. ಆ ದೇವಮಾನವ ದಿವ್ಯ ವಿಗ್ರಹದಲ್ಲಿ ಲೀನವಾದಂತೆ ಅರಿವಾಗಿ ಕರಗಿಹೋಗುತ್ತೇವೆ. ಗಂಟೆಗಟ್ಟಲೆ ಅಲ್ಲಿ

ನಿಂತರೂ ಕಾಲ ಜಾರುವ ಅರಿವಾಗುವುದಿಲ್ಲ. ನೋಡಿ ನೋಡಿ ದಷ್ಟೂ ತೃಪ್ತಿಯಾಗುವುದಿಲ್ಲ. ಮೇಲೆ ಆಕಾಶದ ನೀಲಿಯ ವರ್ಣ ತೆಳುವೆರೆಯನ್ನು ಹಿಡಿದಿದೆ ; ಬಿಳಿಯ ಮೋಡಗಳು ಮಧುರ ಕನಸು ಗಳಂತೆ ತೇಲಿಹೋಗುತ್ತಿರುತ್ತವೆ. ಬೆನ್ನ ಹಿಂದೆಯೂ ಆಕಾಶ ಸ್ವಾಮಿಯ ಸೌಂದರ್ಯವನ್ನು ಹೆಚ್ಚಿಸಿದೆ. ಈ ಹಿನ್ನೆಲೆಯಲ್ಲಿ ಆಲಯದ ಎತ್ತರವನ್ನು ಮೀರಿ ಬಿಸಿಲು ಗಾಳಿಗಳಿಗೆ ಮೈಯೊಡ್ಡಿ ಬಾಹುಬಲಿದೇವ :ವರ್ಷಗಳಿಂದ ನಿಂತು ಮಾನವರನ್ನು ಹರಸುತ್ತಿದ್ದಾನೆ. ಹಸನ್ಮುಖಿಯಾಗಿ ಲೋಕಕಲ್ಯಾಣಕ್ಕಾಗಿ ತಪೋ ನಿರತನಾಗಿದ್ದಾನೆ.

ಈ ವಿಗ್ರಹವನ್ನು ತಾವರೆಯ ನಡುವೆ ಕರಣಿಕೆಯ ಮೇಲೆ ಕಡೆದಿದ್ದಾರೆ. ಅಕ್ಕಪಕ್ಕದಲ್ಲಿ ಮುಂಡಿಯುವರೆಗೂ ಹುತ್ತಗಳು ಬೆಳೆ ದಂತೆ ಕಲ್ಲಿನಲ್ಲಿಯೇ ಕಡೆಯಲಾಗಿದೆ. ಅಂದವಾದ ತೊಡೆ, ತೋಳು ಗಳ ಮೇಲೆ ಸುಂದರವಾದ ಬಳ್ಳಿಗಳನ್ನು ಬಿಡಿಸಿದ್ದಾರೆ. ಪಾದದ ಕೆಳಗಿರುವ ಕಮಲ, ಬೆಳೆದಂತೆ ತೋರುವ ಹುತ್ತ, ಗೊಮ್ಮಟೇಶ್ವರ ಪ್ರತಿಮೆ ಇಷ್ಟನ್ನೂ ಒಂದೇ ಶಿಲೆಯಲ್ಲಿ ಕಡೆದ ಶಿಲ್ಪಿಯ ಸಾಮರ್ಥ್ಯ ಮೆಚ್ಚತಕ್ಕದ್ದೇ. ಇಷ್ಟು ದೊಡ್ಡ ಪ್ರತಿಮೆಯಾದರೂ ಮಗುವಿನ ಮುಗ್ಧ ಸೌಂದರ್ಯ ಅದರಲ್ಲಿ ಒಡಮೂಡಿದೆ. ಬಹು ಮಂದಿ ಶಿಲ್ಪಿ ಗಳು ಈ ವಿಗ್ರಹಕ್ಕೆ ಕೆಲಸಮಾಡಿರಬಹುದೆಂದು ಊಹಿಸುತ್ತಾರೆ. ಅಂತು ಸೌಂದರ್ಯದಲ್ಲಿ ಇದಕ್ಕೆ ಸಮಾನವಾದ ವಿಗ್ರಹ ಜಗತ್ತಿನಲ್ಲಿ ಮತ್ತೊಂದಿಲ್ಲವೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಇದು ಕನ್ನಡಿಗರಿಗೊಂದು ಹೆಮ್ಮೆಯಲ್ಲವೆ?

ಗೊಮ್ಮಟೇಶ್ವರ ವಿಗ್ರಹದ ಎತ್ತರದ ಬಗ್ಗೆ ಭಿನ್ನಾಭಿಪ್ರಾಯ ಗಳಿದ್ದುವು. ಇತ್ತೀಚೆಗೆ ಅಳತೆ ಮಾಡಿಸಿ ಸುಮಾರು ೫೮ ಅಡಿ ಗಳೆಂದು ನಿರ್ದಿಷ್ಟವಾಗಿ ಗೊತ್ತುಹಚ್ಚಿದ್ದಾರೆ. ಇದನ್ನು ಕ್ರಿ. ಶ.

೧೦೩೦ ರಲ್ಲಿ ಕಡೆದಿರಬಹುದೆಂದು ಶಾಸನಗಳಿಂದ ನಿರ್ಧರಿಸಿದ್ದಾರೆ. ಇದರ ಸುತ್ತಾಲಯುವನ್ನು ಹೊಯ್ಸಳೇಶ್ವರ ವಿಷ್ಣುವರ್ಧನನ ಸೇನಾ




ತಾವರೆಯ ನಡುವೆ ಕರಣಿಕೆಯ ಮೇಲಿರುವ ಪಾದಗಳು

ಪತಿಯಾದ ಗಂಗರಾಜನು ಕಟ್ಟಿಸಿದನು. ಇದರಲ್ಲಿ ತೀರ್ಥಂಕರರ ೪೩ ಪ್ರತಿಮೆಗಳು ಸ್ಥಾಪಿಸಲ್ಪಟ್ಟಿವೆ. ಪ್ರತಿಯೊಂದು ವಿಗ್ರಹವೂ ತುಂಬ ಆಕರ್ಷಕವಾಗಿದೆ. ನಾನಾ ಬಗೆಯ ಶಿಲೆಗಳಲ್ಲಿ ಕಡೆಯಲ್ಪಟ್ಟು ಸುಂದರವಾಗಿವೆ.

ಶ್ರೀ ಗೊಮ್ಮಟೇಶ್ವರ ವಿಗ್ರಹದ ಬಲ ಪಾರ್ಶ್ವದಲ್ಲಿ ಸುತ್ತಾ
ಲಯದ ಮೇಲೆ ಹೋಗಲು ದಾರಿಯಿದೆ. ಬಾಹುಬಲಿಯ ಸೌಂದರ
ವನ್ನು ಆ ಕಟ್ಟಡದ ಮೇಲೆ ನಿಂತೂ ನೋಡಬಹುದು. ಈ ಕಟ್ಟ
ಬಾಹುಬಲಿಯ ತೊಡೆಗಳ ವರೆಗೆ ಮಾತ್ರ ರಕ್ಷೆಯಾಗಿದೆ. ಯಾವುದೊ
ಒಂದು ಗೋಪುರದೋಪಾದಿಯಲ್ಲಿ ಬಹು ದೂರದ ವರೆಗೂ ಎತ್ತರ
ವಾಗಿ ಪ್ರತಿಮೆ ತೋರುತ್ತಿರುತ್ತದೆ. ಶ್ರವಣಬೆಳುಗೊಳ ಹತ್ತಿ
ವಾದಂತೆ ಮನುಷ್ಯಾಕೃತಿ ಬೆಟ್ಟದ ನೆತ್ತಿಯಲ್ಲಿ ಕಾಣತೊಡಗಿ ನಮ್ಮ
ಕುತೂಹಲ ಹೆಚ್ಚುತ್ತದೆ. ಆಕಾಶಕ್ಕೆ ಮೈಯೊಡ್ಡಿ ಸ್ವತಂತ್ರವಾಗಿ



ಮನುಷ್ಯಾಕೃತಿ ಇಂದ್ರಗಿರಿಯ ನೆತ್ತಿಯಮೇಲೆ ಕಾಣತೊಡಗಿ
ನಮ್ಮ ಕುತೂಹಲ ಹೆಚ್ಚುತ್ತದೆ

ನಿಂತ ದೃಶ್ಯ ಯಾರಿಗೆ ಆನಂದವನ್ನು ತರದು. ಆದರೆ ಬೆಟ್ಟ ತೀರ
ಸಮೀಪಗೊಂಡಾಗ ಸುತ್ತಾಲಯಗಳೂ ಕೋಟೆ ಗೋಡೆಗಳೂ
ವಿಗ್ರಹದ ಸುತ್ತಲೂ ಬೆಳೆದು ನಿಂತು ಸ್ವಾಮಿಯ ದರ್ಶನ ಗಿರಿಯನ್ನು
ಏರದ ಹೊರತು ಅಸಾಧ್ಯವೆನ್ನುವಂತೆ ಮಾಡುತ್ತವೆ.

ವಿಗ್ರಹದ ಹಿಂಬದಿಯ ಮಂಟಪದ ಮೇಲೆ ನಿಂತು ದೂರದ ಪ್ರಕೃತಿಯನ್ನು ನೋಡಲು ಈ ಎರಡು ಕಣ್ಣುಗಳು ಸಾಲದೆನಿಸುತ್ತದೆ. ದೂರ ದೂರದ ಅನೇಕ ಬೆಟ್ಟಗುಡ್ಡಗಳು ನೀಲಿಯ ಬೂದಿಯ ರಾಶಿಯಂತೆ ತೋರುತ್ತವೆ. ದಿಗಂತದಲ್ಲಿ ಬಿಡಿಸಿದ ಆಕೃತಿಗಳಂತೆ ನಿಂತಿರುತ್ತವೆ. ಮೇಲುಕೋಟೆ, ಚುಂಚನಗಿರಿ, ಚಾಮುಂಡಿಗಿರಿ ಮುಂತಾದ ಬೆಟ್ಟಗಳು ಒಂದೊಂದು ದಿಕ್ಕಿನಲ್ಲಿ ಗೊಮ್ಮಟ ಜಿನನ ಸಿರಿಮುಡಿಯನ್ನು ನೋಡುತ್ತಲೇ ನಿಂತಿವೆ. ಅತ್ಯಂತ ಎತ್ತರದಲ್ಲಿ ನಿಂತ ನಮಗೆ ತಂಪಾದ ಗಾಳಿ ಬೀಸಿ ಬಂದು ಆಹ್ಲಾದವನ್ನು ತರುತ್ತದೆ. ದೃಷ್ಟಿಯನ್ನು ಸುತ್ತಲೂ ಹರಿಸಿದಂತೆಲ್ಲ ಊರಿನ ಇನ್ನೊಂದು ಪಕ್ಕದ ಚಂದ್ರಗಿರಿ ಅತ್ತ ಕರೆಯುತ್ತದೆ. ಅಲ್ಲಿನ ಸುಂದರ ಬಸದಿಗಳು 'ನಮ್ಮನ್ನು ಮರೆತೀರಾ?' ಎಂದು ಕೇಳುತ್ತಿರುವಂತೆ ತೋರುತ್ತವೆ. ಇಂದ್ರಗಿರಿಯನ್ನು ಇಳಿದು ಬರುವಾಗ ನಮ್ಮ ಮನವನ್ನೆಲ್ಲಾ ಶ್ರೀ ಗೊಮ್ಮಟೇಶ್ವರನೇ ಆಕ್ರಮಿಸಿರುತ್ತಾನೆ. ಎಲ್ಲೆಲ್ಲಿಯೂ ಅವನೇ ತುಂಬಿ ತೋರುತ್ತಾನೆ.

೫

ಶ್ರವಣಬೆಳುಗೊಳದ ಚಿಕ್ಕ ಬೆಟ್ಟವನ್ನು ಚಂದ್ರಗಿರಿ ಎಂದು ಕರೆಯುತ್ತಾರೆ. ಹಿಂದೆ ನಮ್ಮ ಭರತ ಖಂಡವನ್ನು ಚಂದ್ರಗುಪ್ತ ಮೌರ್ಯನೆಂಬ ದೊಡ್ಡ ಚಕ್ರವರ್ತಿ ಆಳುತ್ತಿದ್ದನು. ಅವನು ಪ್ರಜಾಪ್ರೇಮಿ, ದಕ್ಷ ಎಂದು ಹೆಸರು ಪಡೆದವನು. ಒಂದು ದಿನ ರಾತ್ರಿ ಅವನಿಗೆ ಹದಿನಾರು ಕೆಟ್ಟ ಸ್ವಪ್ನಗಳು ಬಿದ್ದುವು. ಈ ವಿಚಿತ್ರವನ್ನು ಚಕ್ರವರ್ತಿಯು ತನ್ನ ಗುರುವಾದ ಭದ್ರಬಾಹು ಮುನಿಗಳಿಗೆ ತಿಳಿಸಿದನು. ಗಾಬರಿಗೊಂಡ ಚಂದ್ರಗುಪ್ತನ ಈ ಕನಸುಗಳ ಫಲವೇನೆಂದು ಮುನಿಗಳು ಯೋಚಿಸಿದರು. ಅವನ ರಾಜ್ಯದಲ್ಲಿ

ಮುಂದೆ ವೀರಕ್ಷಾಮವು ತಲೆದೋರುವುದೆಂದು ಅವರ ದಿವ್ಯ ದೃಷ್ಟಿ
ಗೋಚರಿಸಿತು. ಒಂದೆರಡು ವರ್ಷಗಳ ಕ್ಷಾಮವಲ್ಲ. ಹದಿನಾ
ವರ್ಷ! ಈ ವಿಷಯವನ್ನು ಕೇಳಿ ದೊರೆ ವ್ಯಾಕುಲಚಿತ್ತನಾದನು
ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದ ಪ್ರಜೆಗಳು ಕ್ಷಾಮದಿಂ
ನರಳಬೇಕಾಗುವುದೇ ಎಂದು ಅವನು ಬಹಳವಾಗಿ ನೊಂದ
ಕೊಂಡನು. ಕ್ಷಾಮಪೀಡಿತರಾದ ಪ್ರಜೆಗಳ ಕಷ್ಟ ಕಾರ್ಪಣ
ಗಳನ್ನು ಕಣ್ಣಿನಿಂದ ನೋಡಿ ಸಹಿಸುವುದಕ್ಕಾದೀತೆ? ಅದಕ್ಕಾ
ಚಂದ್ರಗುಪ್ತನು ತನ್ನ ಮಗನಿಗೆ ಪಟ್ಟಕಟ್ಟಿದನು. ಗುರುವಾ
ಭದ್ರಬಾಹುವಿನೊಡನೆ ಪುಣ್ಯಕ್ಷೇತ್ರಗಳ ಸಂದರ್ಶನಕ್ಕೆ ಹೊರಟನು
ಹೀಗೆ ಸಂಚಾರ ಮಾಡುತ್ತಿರಬೇಕಾದರೆ ಶ್ರವಣಬೆಳುಗೊಳದ ಚಿಕ್ಕ
ಬೆಟ್ಟಕ್ಕೆ ಬಂದನಂತೆ. ಇಲ್ಲಿ ಒಂದು ಚೈತ್ಯಾಲಯವನ್ನು ಕಟ್ಟಿಸಿ




ಶ್ರವಣ ಬೆಳಗೊಳದ ಈ ಚಿಕ್ಕ ಬೆಟ್ಟವನ್ನು 'ಚಂದ್ರಗಿರಿ' ಎನ್ನುತ್ತಾರೆ

ಅದರಲ್ಲಿ ಉಳಿದುಕೊಂಡಿದ್ದನೆಂದು ಹೇಳುತ್ತಾರೆ. ಭದ್ರಬಾಹು
ಮುನಿಗಳೂ ಅವರ ಶಿಷ್ಯರೂ ಈ ಗಿರಿಯಲ್ಲೇ ತಪಸ್ಸುಮಾಡಿಕೊಂ

ಡಿದ್ದರಂತೆ. ಚಂದ್ರಗುಪ್ತನು ಇಲ್ಲಿಯೇ ಪರಂಧಾಮುವನ್ನೈದಿದನಂತೆ. ಅಷ್ಟು ದೊಡ್ಡ ಚಕ್ರವರ್ತಿ ಸ್ವಲ್ಪಕಾಲ ತಂಗಿದ್ದು ಇಲ್ಲಿಯೇ ಕಾಲವಾದುದರಿಂದ ಈ ಚಿಕ್ಕ ಬೆಟ್ಟವನ್ನು ಚಂದ್ರಗಿರಿ ಎಂದು ಆ ಚಕ್ರವರ್ತಿಯ ಹೆಸರಿನಲ್ಲಿ ಕರೆದಿದ್ದಾರೆ. ಚಂದ್ರಗುಪ್ತನೇ ಕಟ್ಟಿಸಿದನೆಂದು ಹೇಳಲಾದ ಬಸದಿಯೊಂದು ಈ ಬೆಟ್ಟದಲ್ಲಿ ಈಗಲೂ ಇದೆ.

ಚಂದ್ರಗಿರಿಯು ಸಮುದ್ರ ಮಟ್ಟದಿಂದ ೩೦೦೦ ಅಡಿಗಳಷ್ಟು ಎತ್ತರವಿದೆ. ಇತಿಹಾಸದ ದೃಷ್ಟಿಯಿಂದ ಇದು ಪ್ರಸಿದ್ಧವಾದುದು. ಬೆಟ್ಟದ ಶಿಖರ ರಮ್ಯವಾಗಿದೆ. ಈ ಬೆಟ್ಟದಿಂದ ನಿಂತು ನೋಡಿದರೆ ಇಂದ್ರಗಿರಿಯ ನೆತ್ತಿಯಲ್ಲಿರುವ ಶ್ರೀ ಗೊಮ್ಮಟೇಶ್ವರ ವಿಗ್ರಹ ಬಹು ಅಂದವಾಗಿ ತೋರುತ್ತದೆ. ಗೊಮ್ಮಟೇಶ್ವರನು ಈ ಗಿರಿಯನ್ನು ನೋಡುತ್ತಿರುವನೋ ಎನ್ನುವಂತಿದೆ. ಚಂದ್ರಗಿರಿಯಲ್ಲಿ ಹಿಂದೆ ಅನೇಕ ಋಷಿಗಳು ತಪಸ್ಸುಮಾಡಿದ್ದಾರೆ. ಚಂದ್ರಗುಪ್ತನ ಗುರುವಾದ ಭದ್ರಬಾಹು ಮುನಿಗಳು ತಪಸ್ಸುಮಾಡಿದ ಗುಹೆಯನ್ನು ಈಗಲೂ ನೋಡಬಹುದು. ಸೋಪಾನದ ಸಮೀಪದಲ್ಲಿಯೇ ಆ ಮುನಿಗಳ ಚರಣಗಳ ಗುರುತೂ ಇದೆ.

ದೊಡ್ಡ ಬೆಟ್ಟದಲ್ಲಿನ ಹಾಗೆಯೇ ಚಂದ್ರಗಿರಿಯ ಮೇಲೂ ಒಂದು ವಿಸ್ತಾರವಾದ ಕೋಟೆಯಿದೆ. ಇದರೊಳಗೆ ಪ್ರಸಿದ್ಧವಾದ ಶಾಸನಗಳೂ ಬಸದಿಗಳೂ ಇವೆ. ಕೋಟೆಯ ಬಾಗಿಲನ್ನು ಪ್ರವೇಶಿಸುತ್ತಿದ್ದಂತೆಯೇ ಪಕ್ಕದಲ್ಲಿ ಎತ್ತರವಾದ ಕಂಬವೊಂದು ಕಾಣಿಸುತ್ತದೆ. ಅತ್ಯಂತ ಸುಂದರವಾಗಿ ಕೆತ್ತಿರುವ ಇದನ್ನು ಬ್ರಹ್ಮದೇವರ ಕಂಬವೆಂದು ಕರೆಯುತ್ತಾರೆ. ಈ ಕಂಬಕ್ಕೆ ಉತ್ತರದಲ್ಲಿ ಕಟಕಟೆಯನ್ನು ಕಟ್ಟಿ ಏನನ್ನೋ ರಕ್ಷಿಸಿದ್ದಾರೆ. ಅದೇನೆಂದು ಹೋಗಿ ನೋಡಿದರೆ 'ಶ್ರೀ ಕವಿರತ್ನ' ಎಂಬ ಹೆಸರನ್ನು ಬಿಟ್ಟರೆ ಮತ್ತೇನೂ ತೋರದು. ಹೌದು; ಆ ಹೆಸರಿಗಾಗಿಯೇ ಈ ರಕ್ಷಣೆ. ಹಿಂದೆ

ಪಂಪ, ಪೊನ್ನ, ರನ್ನ ಎಂಬ ಮೂವರು ಕನ್ನಡ ಮಹಾ ಕವಿ
ಳಿದ್ದರು. ಈ ಮೂವರೂ ಜೈನರು. ಇವರನ್ನು ರತ್ನ ತ್ರಯರೆಂದ
ಕರೆದಿದ್ದಾರೆ. ಇವರೆಲ್ಲ ಜೈನ ಪುರಾಣಗಳನ್ನೂ ಇತರ ಕಾವ್ಯಗಳನ್ನೂ
ಬರೆದು ಪ್ರಸಿದ್ಧರಾಗಿದ್ದಾರೆ. ಅವರಲ್ಲಿ ಮೂರನೆಯವನಾದ
ರನ್ನನು ಈ ಬೆಟ್ಟದಲ್ಲಿಯೇ ಇದ್ದನೆಂಬುದಕ್ಕೆ ಅನೇಕ ನಿದರ್ಶನಗಳಿವೆ.
ಇದು ಅವನ ಸ್ವಹಸ್ತಾಕ್ಷರ; ಅವನ ಸಹಿ, ಎಂದು ಇಷ್ಟು ಸುರಕ್ಷಿತ
ಗೊಳಿಸಿದ್ದಾರೆ. ಅವನು ಶ್ರವಣಬೆಳುಗೊಳದಲ್ಲಿದ್ದನೆಂಬುದಕ್ಕೆ
ಇನ್ನೂ ಕೆಲವು ನಿದರ್ಶನಗಳಿವೆ. ಅವನ ಪೋಷಕಿಯೂ, ಇಮ್ಮಡಿ
ತೈಲಪನ ತಾಯಿಯೂ ಆದ ದಾನಚಿಂತಾಮಣಿ ಅತ್ತಿಮಬ್ಬೆ ಎಂಬ



ಕೋಟೆಯೊಳಗಿನ ಬಸದಿಗಳು ಒಂದಕ್ಕಿಂತ ಒಂದು ಸುಂದರವಾಗಿ ತೋರುತ್ತವೆ

ಪ್ರಖ್ಯಾತಳಾದ ದಾನಿಯೊಬ್ಬಳಿದ್ದಳು. ಅವಳು ಒಮ್ಮೆ ಶ್ರವಣಬೆಳು
ಗೊಳಕ್ಕೆ ಬಂದಿದ್ದಾಗ ಅಕಾಲವೃಷ್ಟಿಯಾಯಿತಂತೆ. ಅವಳು ಅಷ್ಟು
ಮಹಿಮಾನ್ವಿತೆ ಎಂದು ರನ್ನ ತನ್ನ ಅಜಿತನಾಥ ಪುರಾಣ ಎಂಬ ಕಾವ್ಯ

ದಲ್ಲಿ ಹೇಳಿಕೊಂಡಿದ್ದಾನೆ. ರನ್ನನು ಅತ್ತಿಮಬ್ಬೆಯ ದೃಷ್ಟಿಗೆ ಬಿದ್ದುದೂ ಶ್ರವಣಬೆಳುಗೊಳದಲ್ಲಿಯೇ ಎಂದು ಕೆಲವು ಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ. ಹೀಗೆ ಶ್ರವಣಬೆಳುಗೊಳ ಉತ್ತಮ ಕವಿಗಳಿಗೂ ಆವಾಸಸ್ಥಾನವಾಗಿದ್ದಿತು.

ಕೋಟೆಯೊಳಗಿನ ಬಸದಿಗಳು ಒಂದಕ್ಕಿಂತ ಒಂದು ಸುಂದರ ವಾಗಿ ತೋರುತ್ತವೆ. ಎಲ್ಲವೂ ಶಿಲ್ಪಕಲಾ ಕೌಶಲದಿಂದ ಮೆರೆಯು ತ್ತಿವೆ. ಎಷ್ಟು ಪುರಾತನವೋ ಅಷ್ಟೇ ಕಲಾತ್ಮಕವೂ ಆದುವು. ಈ ಬಸದಿಗಳನ್ನೆಲ್ಲ ಸುತ್ತಿ ಬಂದರೆ ಒಂದು ಪುಟ್ಟ ಊರನ್ನೇ ಬಳಸಿ ಬಂದಂತಾಗುತ್ತದೆ. ಇಲ್ಲಿನ ಮೌನ, ಇಲ್ಲಿನ ಪ್ರಶಾಂತ ವಾತಾ ವರಣ ಮನಸ್ಸನ್ನು ಎಲ್ಲಿಗೋ ಕರೆದೊಯ್ಯುತ್ತದೆ. ನವನಾಗರಿಕ ಪ್ರಪಂಚದ ಸೋಂಕು ತಟ್ಟದೆ ಈ ಪ್ರಾಚೀನ ಬಸದಿಗಳು ಹಳೆಯ ವಾತಾವರಣವನ್ನು ಉಳಿಸಿವೆ. ಆದರೂ ಒಮ್ಮೊಮ್ಮೆ ಇಲ್ಲಿನ ಭೀಕರ ಮೌನ ಮನಸ್ಸನ್ನು ಕಲಕುತ್ತದೆ. ಶೂನ್ಯ ಗಾಳಿ ಬೀಸುವ ಬಗೆ ಭೀತಿಯನ್ನು ತರುತ್ತದೆ. ಒಂದು ಕಡೆ ಚಂದ್ರಗುಪ್ತನು ಕಟ್ಟಿಸಿದ ಕತ್ತಲ ಬಸದಿ ಇದೆ. ಮತ್ತೊಂದು ಕಡೆ ಚಾವುಂಡರಾಯನು ಕಟ್ಟಿಸಿದ ಚಾವುಂಡರಾಯ ಬಸದಿ ಇದೆ. ಕಲಾಮಯವಾದ ಶಿಲಾ ಸ್ತಂಭಗಳು ಎತ್ತರವಾಗಿ ಆಕರ್ಷಕವಾಗಿ ಅಲ್ಲಲ್ಲಿ ನಿಂತಿವೆ. ಬಸದಿ ಗಳ ಹಿಂಬದಿಯಲ್ಲಿ ನೆಲದಲ್ಲಿ ಹೂತಿರುವ ಕಪ್ಪುಶಿಲೆಯ ದೊಡ್ಡ ವಿಗ್ರಹವೊಂದು ಗೋಚರಿಸುತ್ತದೆ. ಇದು ಭರತೇಶ್ವರನ ಪ್ರತಿಮೆ. ಭಿನ್ನವಾದುದರಿಂದ ಅದನ್ನು ಈ ರೀತಿ ಹೂತಿರಬಹುದು. ಭುಜದ ಮೇಲೆ ಕುಟ್ಟಿದರೆ ಒಂದು ವಿಧವಾದ ಕಂಚಿನ ಶಬ್ದ ಬರುತ್ತದೆ.

ಶಾಂತೀಶ್ವರ ಬಸದಿ, ಚಂದ್ರಪ್ರಭ ಬಸದಿ, ಶಾಸನ ಬಸದಿ, ಪಾರ್ಶ್ವನಾಥ ಬಸದಿ, ಮಜ್ಜಿಗಣ್ಣನ ಬಸದಿ, ಎರಡು ಕಟ್ಟೆಯ

ಬಸದಿ, ಸವತಿ ಗಂಧವಾರಣ ಬಸದಿ— ಹೀಗೆ ನಾನಾ ಬಸ
ಗಳನ್ನು ಚಂದ್ರಗಿರಿಯ ಮೇಲೆ ನೋಡಬಹುದು. ಹಿಂದೆ ಆಳಿ
ಅನೇಕ ರಾಜರು ಇವುಗಳಲ್ಲಿ ಕೆಲವನ್ನು ಕಟ್ಟಿಸಿದ್ದಾರೆ. ರಾಣಿಯರ
ಧರ್ಮಶೀಲರೂ ದೈವಭಕ್ತರೂ ಕಟ್ಟಿಸಿದ ಬಸದಿಗಳೂ ಇವೆ.
ಒಂದೊಂದು ಬಸದಿಯಲ್ಲೂ ಒಂದೊಂದು ಸುಂದರವಾದ ವಿಗ್ರ
ವಿದೆ.

ಇಂದ್ರಗಿರಿ ಚಂದ್ರಗಿರಿಗಳನ್ನು ನೋಡಿ ಶ್ರವಣಬೆಳುಗೊಳ
ಪ್ರವಾಸ ಮುಗಿಯಿತು ಎನ್ನಲಾಗುವುದಿಲ್ಲ. ಚಂದ್ರಗಿರಿಯ
ಮತ್ತೊಂದು ನೆರೆಯಲ್ಲಿರುವ ಜಿನನಾಥಪುರವನ್ನೂ ನೋಡಿ ಬ
ಬೇಕು. ಅಲ್ಲಿಯೂ ಸುಂದರವಾದ ಅನೇಕ ಬಸದಿಗಳಿವೆ. ಶ್ರವ
ಬೆಳುಗೊಳದಲ್ಲಿಯೂ ಕೆಲವು ಬಸದಿಗಳಿವೆ. ಅತ್ಯಂತ ಸುಂದ
ವಾದ ಬಸದಿಗಳಿಗೂ ಬೆಳುಗೊಳ ಪ್ರಸಿದ್ಧಿಯಾಗಿದೆ. ಜಗತ್ತಿನಲ್ಲಿ
ಮತ್ತಾವೆಡೆಯಲ್ಲಿಯೂ ಇಲ್ಲದಷ್ಟು ಸುಂದರ ಬಸದಿಗಳು ಇಲ್ಲಿವ
ಎಂದು ಹೇಳುತ್ತಾರೆ. ಅಷ್ಟು ಭವ್ಯವಾಗಿ ನಮ್ಮ ಶಿಲ್ಪಿಗಳು ಕಟ್ಟ
ಹೋಗಿದ್ದಾರೆ. ದೇಗುಲಗಳಿಗೂ ಪ್ರತಿಮೆಗಳಿಗೂ ಪ್ರಕೃತಿ
ಸೌಂದರ್ಯಕ್ಕೂ ಹೆಸರಾಗಿರುವ ಶ್ರವಣಬೆಳುಗೊಳದ ವೈಭವ
ಅಪಾರವಾದುದೇ ನಿಜ. ಜೈನರಿಗೆ ಇದು ಯಾತ್ರಾಸ್ಥಳವಾದರೆ,
ನಾಡಿಗೆ ಕಲೆಯ ತೌರೂರು. ಇಂಥ ಅಪೂರ್ವವಾದ ಊರು ಭರತ
ಖಂಡದಲ್ಲಿಯೇ ಇಲ್ಲವೆನ್ನುವ ಮಾತು ಅತಿಶಯೋಕ್ತಿಯಾಗಲಾರದು.
ಎತ್ತನೋಡಿದರೂ ಬಸದಿಗಳು, ಎಲ್ಲಿ ನೋಡಿದರೂ ಪ್ರತಿಮೆಗಳು,
ಶಿಲಾಸ್ತಂಭಗಳು, ಶ್ರೀಮಠದ ಕಟ್ಟಡಗಳು— ಶ್ರವಣಬೆಳುಗೊಳಕ್ಕೆ
ಕಾಲಿಟ್ಟೆವೆಂದರೆ ಆಯಿತು— ನಮ್ಮ ಮಿಕ್ಕೆಲ್ಲ ಹವ್ಯಾಸಗಳೂ ಮರೆತೇ
ಹೋಗುತ್ತವೆ. ಯಾವುದೋ ದಿವ್ಯಲೋಕದಲ್ಲಿ ನಾವು ವಿಹಾರ
ಮಾಡುತ್ತಿರುವಂತೆ ಹರ್ಷಪುಳಕಿತರಾಗುತ್ತೇವೆ.

ಶ್ರವಣಬೆಳುಗೊಳದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಮಹಾಮಸ್ತಕಾಭಿಷೇಕ ವಿಶೇಷ ಆಕರ್ಷಣೆಯಿಂದ ಕೂಡಿರುತ್ತದೆ. ಭರತಖಂಡದ ಎಲ್ಲ ಕಡೆಗಳಿಂದಲೂ ಯಾತ್ರಿಕರು ಬರುತ್ತಾರೆ. ಲಕ್ಷಾಂತರ ಜನರಿಂದ ಶ್ರವಣಬೆಳುಗೊಳ ತುಂಬಿ ತುಳುಕುತ್ತದೆ. ಆದರೆ ಆ ನೂಕುನುಗ್ಗಲಲ್ಲಿ ಬರಿಯ ಜನಜಾತ್ರೆಯನ್ನು ಮಾತ್ರ ನೋಡಿಕೊಂಡು ಹೋಗಬೇಕು.— ದೂರಕ್ಕೆ ಕಾಣುವ ಹೆಬ್ಬಂಡೆಗಳನ್ನು ಮಾತ್ರ ನೋಡಿ ದಣಿಯಬೇಕು. ಶ್ರವಣಬೆಳುಗೊಳದ ನಿಜವಾದ ಮಹತ್ವವನ್ನು ಪರಿಚಯ ಮಾಡಿಕೊಳ್ಳಬೇಕಾದರೆ ಬಿಡುವಿನ ದಿನಗಳಲ್ಲೇ ಬರಬೇಕು. ವಿವರವಾಗಿ ನೋಡಿಕೊಂಡು ಹೋಗಬೇಕು. ಗೊಮ್ಮಟೇಶ್ವರನ ಸನ್ನಿಧಿಯಲ್ಲಿ ಒಂದೆರಡು ಗಂಟೆಗಳನ್ನಾದರೂ ಕಳೆಯಬೇಕು. ಗೊಮ್ಮಟೇಶ್ವರ ವಿಗ್ರಹದ ಸೌಂದರ್ಯವನ್ನು ಒಂದೊಂದು ದಿಕ್ಕಿನಿಂದಲೂ ನೋಡಿ ಒಂದೊಂದು ಬಗೆಯ ಆನಂದವನ್ನು ಹೊಂದಬಹುದು. ನಡು ಹಗಲಿನಲ್ಲಿ, ಸಂಜೆಯಲ್ಲಿ, ಬೆಳುದಿಂಗಳಲ್ಲಿ ಪ್ರತಿಮೆಯ ಸೌಂದರ್ಯ ಒಂದೊಂದು ರೀತಿಯಲ್ಲಿ ತೋರುವುದೆನ್ನುತ್ತಾರೆ. ಈ ಮಹಾ ಮೂರ್ತಿಯ ಸೌಂದರ್ಯವನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಸವಿಯಬಹುದು. ಆನಂದ ತುಂದಿಲರಾಗಬಹುದು.

ಸಾಮಾನ್ಯರ ಕಣ್ಣಿಗೇ ಗೊಮ್ಮಟೇಶ್ವರ ಪ್ರತಿಮೆ ಇಷ್ಟು ವೈಭವಪೂರ್ಣವಾಗಿ ತೋರಿದರೆ ಸೌಂದರ್ಯ ಪ್ರಿಯರಾದ ಕವಿಗಳ ದೃಷ್ಟಿಯನ್ನು ನೋಡೋಣ. ಭಾವ ಜೀವಿಗಳಾದ ಅವರ ದೃಷ್ಟಿಗೆ ಗೊಮ್ಮಟೇಶ್ವರ ಯಾವರೀತಿ ಕಂಡಿರಬಹುದೆಂಬುದೂ ಮುಖ್ಯವಲ್ಲವೆ? ರವಿ ಕಾಣದುದನ್ನು ಕವಿ ಕಾಣುತ್ತಾನೆಂದು ಹೇಳುತ್ತಾರೆ. ನಮ್ಮ ಗೊಮ್ಮಟ ಮೂರ್ತಿಯಲ್ಲಿ ಕವಿ ಕಂಡ ಸೌಂದರ್ಯವಾವುದು? ವಿಶೇಷವೇನು?

ಹನ್ನೆರಡನೇ ಶತಮಾನದ ಆದಿಭಾಗದಲ್ಲಿ ಬೊಪ್ಪಣನೆಂಬ ಕ
ಇದ್ದನು. ಅವನು ಗೊಮ್ಮಟನ ಸ್ತುತಿರೂಪವಾದ ಪದ್ಯಗಳನ
ಶ್ರವಣಬೆಳುಗೊಳದ ೨೩೪ ನೇ ಶಾಸನದಲ್ಲಿ ಬರೆದಿದ್ದಾನೆ.

ಅತಿ ತುಂಗಾಕೃತಿಯಾದೊಡಾಗದದರೊಳ್ ಸೌಂದರ್ಯ
ಮೌನ್ನತ್ಯಮುಂ।

ನುತ ಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ।
ನುತ ಸ ನರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ।
ಕ್ಷಿತಿ ಸಂಪೂಜ್ಯಮೊ ಗೊಮ್ಮಟೇಶ್ವರಜಿನ ಶ್ರೀರೂಪಮಾತ್ಮೋಪಮಂ॥

ವಿಗ್ರಹ ಕೇವಲ ಎತ್ತರವಾಗಿದ್ದರೆ ಆಯಿತೆ? ಅದರಲ್ಲಿ ಯಾವ
ಸೌಂದರ್ಯವೂ ಇರುವುದಿಲ್ಲ. ಸುಂದರವೂ, ಎತ್ತರವೂ ಆಗಿರುವ
ವಿಗ್ರಹವಾದರೆ ಅದರಲ್ಲಿ ಅತಿಶಯವಾದ ಆಶ್ಚರ್ಯಗಳೇನೂ ಇರು
ವುದಿಲ್ಲ. ಆದರೆ ಲೋಕಪೂಜ್ಯನಾದ ಶ್ರೀ ಗೊಮ್ಮಟೇಶ್ವರ ವಿಗ್ರಹ
ದಲ್ಲಿ ಬಾಹುಬಲಿಯ ಘನತೆಗೆ ತಕ್ಕಂತೆ– ಸೌಂದರ್ಯವೂ ಔನ್ನ
ತ್ಯವೂ ಗಾಂಭೀರ್ಯವೂ ಒಟ್ಟುಗೂಡಿವೆ.

ಸಮ್ಮದವಾಗಲಾಗ ಕೊಲೆಯುಂ ಪುಸಿಯುಂ ಕಳವುಂ ಪರಾಂಗನಾ।
ಸಮ್ಮತಿಯುಂ ಪರಿಗ್ರಹದಕಾಂಕ್ಷೆಯುಮೆಂಬಿವರಿಂದಮಾದೊಡೆಂ।
ದುಂಮನುಜಂಗಿಹತ್ರೆಯ ಪರತ್ರೆಯ ಕೇಡೆನುತುಂ ಮಹೋಚ್ಚದೊಳ್।
ಗೊಮ್ಮಟದೇವನಿರ್ದು ಸಲೆ ಸಾರುವವೋಲೆಸೆದಿರ್ದ ನೀಕ್ಷಿಸೈ॥

ಕೊಲೆ, ಸುಳ್ಳು, ಕಳವು, ಪರಸ್ತ್ರೀ ಬಯಕೆ, ಅತಿಯಾದ ಆಕಾಂಕ್ಷೆ
ಮುಂತಾದ ಪ್ರಾಪಂಚಿಕ ವ್ಯಸನಗಳ ತೊಡರುಗಳಿಂದ ಮನುಷ್ಯನಿಗೆ
ಈ ಲೋಕ ಮತ್ತು ಪರಲೋಕ ಎರಡರಲ್ಲಿಯೂ ಕೇಡು ಖಂಡಿತ.

ಈ ಮಾತನ್ನು ಗಟ್ಟಿಯಾಗಿ ಸಾರುವಂತೆ ಶ್ರೀ ಗೊಮ್ಮಟೇಶ್ವರನು ಶೋಭಿಸುತ್ತಿದ್ದಾನೆ.

ನಮ್ಮ ನಾಡಿನ ಆಧುನಿಕ ಮಹಾಕವಿಗಳಾದ ಶ್ರೀ ಕುವೆಂಪು ಅವರ ಹೆಸರನ್ನು ಕೇಳದವರಾರು? ಶ್ರೀ ಗೊಮ್ಮಟೇಶ್ವರನನ್ನು ಕುರಿತು ಅವರೂ ಕವನಗಳನ್ನು ಬರೆದಿದ್ದಾರೆ. ಅವರ ಕವನದ ಕೆಲವು ಸಾಲುಗಳನ್ನು ಇಲ್ಲಿ ಸವಿಯಬಹುದಾಗಿದೆ—

* "........ಕಾವಿಯಿಂ ಗುರುವಾಗಿ, ಹೊನ್ನಿನಿಂ ಧೊರೆಯಾಗಿ
ರಣದುಡುಗೆ ದೆಸೆಯಿಂದೆ ರಣಧೀರನೆಂದಾಗಿ
ಜನಿವಾರದಿಂದೆ ಬ್ರಾಹ್ಮಣನಾಗಿ, ಬೂದಿಯಿಂ
ಶಿವಭಕ್ತನಾಗಿ, ವೈಷ್ಣವನಾಗಿ ನಾಮದಿಂ
ಮೆರೆದುರಿವರೆಲ್ಲರೂ ಬಂದು ಕಲಿಯಲಿ ಇಲ್ಲಿ
ನಗ್ನತೆಯ ಮಹಿಮೆಯಂ ನಿನ್ನ ಸಾನ್ನಿಧ್ಯದಲಿ!"

ಶ್ರೀ ಗೊಮ್ಮಟೇಶ್ವರ ವಿಗ್ರಹವನ್ನು ಬೋಳು ಮೈಯಲ್ಲಿ ಕಡೆಯಲಾಗಿದೆ. ಸಾತ್ವಿಕ ಸೌಂದರ್ಯದಲ್ಲಿ ಈ ಬೋಳು ಮೈ ಯಾರಿಗೂ ಅಲ್ಪ ಭಾವನೆಗೆ ಎಡೆಕೊಡುವುದಿಲ್ಲ. ಮಗುವಿನಂತೆ ತೋರುತ್ತಾನೆ ಮಹಾಮೂರ್ತಿ. ಈ ನಗ್ನ ಮೂರ್ತಿಯ ಮುಂದೆ ಅನೇಕ ವೇಷಗಳಿಂದ ತಲೆದೂಗುವವರು ಬಂದು ಮತಿಗಲಿಯಲಿ. ನಗ್ನತೆಯ ಮಹತ್ವ ಏನೆಂಬುದನ್ನು ಶ್ರೀ ಗೊಮ್ಮಟ ದೇವನ ಸನ್ನಿಧಿಯಲ್ಲಿ ಅರಿಯಲಿ. ಕೃತಕ ವೇಷಗಳಿಂದ ಅವರು ಸಾಧಿಸಲಾಗದುದನ್ನು ಬರಿ ಮೈಯ ಶ್ರೀ ಬಾಹುಬಲಿ ಸ್ವಾಮಿ ಸಾಧಿಸಿದ್ದಾನೆ. ತ್ಯಾಗವೇ ತನ್ನ ಉಡುಪಾಗಿ, ನಿಷ್ಠೆಯೇ ತನ್ನ ವೇಷವಾಗಿ, ತಪವೇ ತನ್ನ ಭೂಷಣವಾಗಿ ನಿಂತ ಶ್ರೀ ಗೊಮ್ಮಟ ಜಿನನಿಗೆ ಯಾರು ಸಮಾನರು?

* " ಬೋಳ್, ಕಾವಿ, ರುದ್ರಾಕ್ಷಿ, ವೈರಮುಡಿ, ಜರಿಯಮಡಿ,
ಕತ್ತಲೆಯ ಗರ್ಭಗುಡಿ ಮೊದಲಾದುವೆಲ್ಲವಂ
ತೊರೆದು, ಸತ್ಯದ ದಿಗಂಬರತೆಯೊಂದನೆ ಒಲಿದು
ಭೂಮ್ಯಂತರಿಕ್ಷಗಳ ಸಂಧಿಸುತ ನಿಂತಿರುವ
ಸೌಂದರ್ಯದಾಚೆಯ ಭವ್ಯತಾ ಸೀಮೆಯಲಿ
ನೆಲೆಸಿರುವ ಓ ನನ್ನ ನಗ್ನ ಗುರುದೇವ ನಮೋ "

* ಶ್ರೀ ಕುವೆಂಪು ಅವರ ಅಗ್ನಿಹಂಸ ಕವನ ಸಂಗ್ರಹದಿಂದ

ನಿರಕ್ಷರತೆ ಎಂಬುದು

# ಭಯಂಕರ ಪಿಶಾಚಿ

ಇದನ್ನು

# ಹೊಡೆದಟ್ಟಬೇಕಾದರೆ

ಎಲ್ಲರೂ

★ ಓದು ★

★ ಬರಹ ★

★ ಲೆಕ್ಕ ★

ಇವುಗಳನ್ನು ಕಲಿಯಲೇಬೇಕು.

ದೊಡ್ಡವರು ವಯಸ್ಕರ ಶಾಲೆಗೆ ಸೇರಿರಿ

ಮಕ್ಕಳನ್ನು ಹತ್ತಿರದ ಪ್ರಾಥಮಿಕ ಶಾಲೆಗೆ ಸೇರಿಸಿರಿ

ಅಸಡ್ಡೆ ತೋರಬೇಡಿ

---

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ನೀವು

# ಓದಬೇಕಾದ ಹೊಸ ಪುಸ್ತಕಗಳು

—o—

## ಪುಸ್ತಕ ಭಂಡಾರ ಮಾಲೆಯ ಪುಸ್ತಕಗಳು

ಆಕಾಶ ಲೋಕ
ಭೂದಾನ ಯಜ್ಞ ಯಾತ್ರೆ
ನಮ್ಮ ಭೂಮಿ
ಸರ್ವಜ್ಞ ವಚನ ಸಂಗ್ರಹ
ವಿದ್ಯಾ ಪೀಠಗಳು

## ವಯಸ್ಕರ ಶಿಕ್ಷಣ ಮಾಲೆಯ ಪುಸ್ತಕಗಳು :

(ಪ್ರತಿ ಪುಸ್ತಕದ ಬೆಲೆ ೧೯ ನಯೆ ಪೈಸೆ)

ಬಂಗಾರದ ಕತೆ
ಎಡಿಸನ್
ಜೀವಸಂತಾನ ಸಾಗಿದ ಬಗೆ
ಅಕ್ಷರ ವೈದ್ಯ
ಜೇನು ಸಾಕುವ ಬಗೆ
ಬಸವಣ್ಣನವರ ಮಾತು
ಸೂರ್ಯ, ಚಂದ್ರ

ಮುಂತಾದ ವಿಜ್ಞಾನ, ಕಲೆ, ಸಮಾಜಶಾಸ್ತ್ರ, ಕತೆ, ಕಾನೂನುಗಳಿಗೆ ಸಂಬಂಧಿಸಿದ ನೂರಾರು ಪುಸ್ತಕಗಳನ್ನು ತರಿಸಿ ಓದಿ.

ಪ್ರಕಾಶಕರು :

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ
ಮೈಸೂರು